


# ಸಪ್ತಗಿರಿ



ಕನ್ನಡ, ತೆಲುಗು, ತಮಿಳು, ಇಂಗ್ಲೀಷ್, ಹಿಂದಿಗಳಲ್ಲಿ ಪ್ರಕಟವಾಗುವ ಮಾಸಪತ್ರಿಕೆ.

ಸಂಪುಟ 11] ಮಾರ್ಚ್ 1981 [ಸಂಚಿಕೆ 10

**ಬಿಡಿ ಪ್ರತಿ ೫೦ ಪೈಸೆ.**

**ಸಂವತ್ಸರ ಚಂದಾ ೬ ರೂ.**

ಗೌರವ ಸಂಪಾದಕರು ;
ಶ್ರೀ ಪಿ. ವಿ. ಆರ್. ಕೆ. ಪ್ರಸಾದ್,
ಐ.ಎ.ಎಸ್.,
ಟೆಲಿಫೋನ್ ನಂಬರು: 2322

ಸಂಪಾದಕರು:
ಕೆ. ಸುಬ್ಬಾರಾವು, ಎಂ.ಎ.,
ತಿರುಮಲೆ ತಿರುಪತಿ ದೇವಸ್ಥಾನಗಳು, ತಿರುಪತಿ.
ಟೆಲಿಫೋನ್ ನಂಬರು; 2254

ಮುದ್ರಣ:
ಯಂ. ವಿಜಯಕುಮಾರ್‌ರೆಡ್ಡಿ
ಮೇನೆಜರ್, ತಿ. ತಿ. ದೇ. ಪ್ರೆಸ್, ತಿರುಪತಿ.
ಟೆಲಿಫೋನ್ ನಂಬರು; 2340

ಮಿಕ್ಕ ವಿವರಗಳಿಗೆ:
ಸಂಪಾದಕರು,
ತಿರುಮಲೆ ತಿರುಪತಿ ದೇವಸ್ಥಾನಗಳು,
ತಿರುಪತಿ



## ವಿಷಯಸೂಚಿ



ಮುಖಚಿತ್ರ : 'ಅರ್ಧನಾರೀಶ್ವರ' ಚಿತ್ರ : ಕೆ. ಜಗದೀಶ್

# ಓದುಗರ ಓಲೆ

ಮಾನ್ಯ ಸಂಪಾದಕರೇ,

"ಸಪ್ತಗಿರಿ" ಮಾಸಪತ್ರಿಕೆಯ ಸಂಚಿಕೆಗಳನ್ನು ಓದುತ್ತ ನಡೆದಂತೆ ತಾವು ಹರಿದಾಸ ಸಾಹಿತ್ಯಕ್ಕೆ ನೀಡುತ್ತಿರುವ ಪ್ರಾಧಾನ್ಯ ತಿಳಿದು ಮನಸ್ಸು ಹರ್ಷಿಸುತ್ತದೆ. ಹೈಂದವ ಸಮಾಜಕ್ಕೆ ತಮ್ಮ ಮಾಸಪತ್ರಿಕೆ ಸಲ್ಲಿಸುತ್ತಿರುವ ಸೇವೆ ನಿಜಕ್ಕೂ ಅಭಿನಂದನೀಯ. ಆಗಸ್ಟ್ 1980ರ ಸಂಚಿಕೆಯಂತೂ ತುಂಬಾ ಮನಮೆಚ್ಚಿಸುವಂಥ ಲೇಖನಗಳನ್ನೊಳಗೊಂಡಿದ್ದಾಗಿ ಆಸ್ತಿಕರ ರಸಗ್ರಹಣಕ್ಕೆ ಪಾತ್ರವಾಗಿದೆ.

ಅಷ್ಟೇ ಅಲ್ಲ, ದಾಸಸಾಹಿತ್ಯದ ಬಗೆಗೂ ತಾವು ಆಗಾಗ ಪುಸ್ತಕಗಳನ್ನು ಪ್ರಕಟಿಸುತ್ತಿರುವುದು ಕನ್ನಡದ ಜನರಿಗೆ ತುಂಬಾ ಉಪಕರಿಸಿದಂತಾಗಿದೆ. ಶ್ರೀ ವ್ಯಾಸರಾಜಗುರು ಸಾರ್ವಭೌಮರು ಸ್ವಯಂ 12 ವರ್ಷಗಳಕಾಲ ತಿರುಪತಿಯ ಶ್ರೀ ವೆಂಕಟೇಶ್ವರನನ್ನು ಪೂಜಿಸಿ ಅವನ ದರ್ಶನ ಭಾಗ್ಯ ಪಡೆದದ್ದನ್ನು ಕರ್ನಾಟಕದ ಜನತೆ ಇಲ್ಲಿ ನೆನೆಯುವಂತಾಗಿದೆ, ನಿಮ್ಮ 'ಸಪ್ತಗಿರಿ' ಸಂಚಿಕೆಗಳನ್ನು ಕಂಡು.

ಹೀಗೆಯೇ ಸಪ್ತಗಿರಿ' ಸಾರ್ವಕಾಲಿಕ ಧರ್ಮರಕ್ಷಕ ಅಮೃತ ಸೇಚನೆಗೈಯುತ್ತ ಅಮರವಾಗಿರಲೆಂದು ಆಶಿಸುತ್ತೇನೆ.

ಬಿ. ಎನ್. ರಾಮಾಚಾರ್, ಬೆಂಗಳೂರು

---

# ಶ್ರೀ ಗೋರಬಾಳ ಹನುಮಂತರಾಯರು

ಕನ್ನಡ ಸಾಹಿತ್ಯವಲ್ಲರಿಯನ್ನು ಚಿಗುರಿಸಿ, ಕನ್ನಡ ಸಂಸ್ಕೃತಿಯ ಸೌರಭವನ್ನು ಹೆಚ್ಚಿಸಿ, ಇಡೀ ಮಾನವಕುಲಕ್ಕೇ ದಿವ್ಯಸಂಜೀವಿನಿಯನ್ನು ನೀಡಿದ ದಾಸಸಾಹಿತ್ಯವು ಕರ್ನಾಟಕ ಪ್ರಾಂತದಲ್ಲಿ ಅದರಲ್ಲೂ ವಿಶೇಷವಾಗಿ ಹೈದ್ರಾಬಾದ್ ಕರ್ನಾಟಕಭಾಗದಲ್ಲಿ ಶತಮಾನಗಳಿಂದ ಬೆಳೆದು ಬಂದಿದ್ದರೂ ಆ ಸಾಹಿತ್ಯದ ಸಂಶೋಧನೆ, ಸಂಗ್ರಹ ಮತ್ತು ಪ್ರಚಾರ ಸಾಕಷ್ಟು ತೃಪ್ತಿಕರವಾಗಿ ಆಗಿಲ್ಲ. ಬೇಲೂರು ಕೇಶವದಾಸರಂಥವರು ಹರಿದಾಸಕೂಟದ ಚರಿತ್ರಾತ್ಮಕ ಹೊತ್ತಗೆಯನ್ನು ಹೊರಡಿಸಿ ಮಹದುಪಕಾರ ಮಾಡಿದರು. ಅವರ ತರುವಾಯ ತಮ್ಮ ತನು, ಮನ, ಧನಗಳನ್ನು ಸವೆಸಿ ದಾಸಸಾಹಿತ್ಯಕ್ಕಾಗಿ ಸಂಪೂರ್ಣ ಬದುಕನ್ನೇ ಮುಡಿಪಾಗಿರಿಸಿದವರೆಂದರೆ ಗೋರಬಾಳ ಹನುಮಂತರಾಯರು. ದಾಸ ಪರಂಪರೆಯಲ್ಲಿ ಬೆಳೆದು ಬಂದು, ನಿಜವಾದ ಹರಿದಾಸರ ಜೀವನವನ್ನು ಸಾಗಿಸಿ, ದಾಸ ಸಾಹಿತ್ಯದ ಸಂಗ್ರಹ, ಪ್ರಚಾರ ಪ್ರಕಟಣೆಗಳಿಗಾಗಿ ಸರ್ವಸ್ವವನ್ನರ್ಪಿಸಿ, ಸಮರ್ಪಣಾ ಭಾವದಿಂದ ಶ್ರೀಹರಿ ಚರಣಗಳ ಪ್ರೀತಿಗೆ ಪಾತ್ರರಾದವರು ರಾಯಚೂರು ಜಿಲ್ಲೆಯ ಲಿಂಗಸುಗೂರು ತಾಲೂಕಿನ ಗೋರಬಾಳ ಹನುಮಂತರಾಯರು.

ವಾದಿರಾಜರು ತಮ್ಮ ತಲೆಯ ಮೇಲೆ ಕಡಲೆಹೂರಣದ ತಟ್ಟೆಯನ್ನಿಟ್ಟುಕೊಂಡು ಶ್ರೀ ಹಯವದನ ದೇವರಿಗೆ ಹೂರಣವನ್ನರ್ಪಿಸುವ ದಿವ್ಯದರ್ಶನವನ್ನು ಕಂಡ ಕುಪ್ಪಣ್ಣ ಮತ್ತು ತುಳಸಮ್ಮ ದಂಪತಿಗಳ ವಂಶದ ಏಳನೇ ತಲೆಮಾರಿನಿಂದ ಜನಿಸಿಬಂದವರು ಗೋರಬಾಳ ಹನುಮಂತರಾಯರು. ಇವರ ತಂದೆ ವೆಂಕಣ್ಣನವರು ಕೂಸಾಗಿರುವಾಗ ಸರ್ಪವೊಂದು ತೊಟ್ಟಿಲ ಮೇಲೇರಿ ತಲೆಯ ಮೇಲಾಡುತ್ತಿತ್ತಂತೆ. ಮುಂದೆ ಅದೇ ಕೂಸು ಸುಪ್ರಸಿದ್ಧ ವೆಂಕಣ್ಣನಾಗಿ ಬೆಳೆಯಿತು. ಅಪರೋಕ್ಷ ಜ್ಞಾನಿಗಳ ಅನುಗ್ರಹಕ್ಕೆ ಪಾತ್ರರಾಗಿ. ದಾಸ ದೀಕ್ಷೆಯನ್ನು ಹೊಂದಿ, ಭಗವದ್ ಭಕ್ತರಾಗಿ ಮೆರೆದ ವೆಂಕಣ್ಣನವರ ಪುತ್ರ ಗೋರಬಾಳ ಹನುಮಂತರಾಯರು, ಶಾಲಿವಾಹನ ಶಕ 1815 ವಿಜಯನಾಮ ಸಂವತ್ಸರದಲ್ಲಿ ಜನಿಸಿದರು. ರಾಯರು 3 ವರ್ಷದವರಾಗಿದ್ದಾಗ ಅಕ್ಷರಾಭ್ಯಾಸ, 5 ವರ್ಷದವರಾಗಿದ್ದಾಗ ಉಪನಯನವಾಯಿತು. ಆಗಿನಿಂದಲೇ ನಿತ್ಯವೂ ರಾಮರ ಸ್ತೋತ್ರಪಠನೆಗೆ ಆರಂಭ. ಹನುಮಂತರಾಯರು 9 ವರ್ಷದವರಾಗಿದ್ದಾಗ ಅವರ ತಂದೆ ತೀರಿಕೊಂಡರು. ಕಕ್ಕ ಕುಪ್ಪಣ್ಣನವರ ಆಶ್ರಯದಲ್ಲಿಯೇ ಅವರು ಬೆಳೆದರು.

ಹನುಮಂತರಾಯರು ಜನಿಸಿದ ಊರು ಗೋರೆಬಾಳ. ಶ್ರೀ ಪ್ರಾಣೇಶದಾಸರು ಒಂದು ಪದದಲ್ಲಿ ಗೊರವ-ಬಾಳು ಎಂದು ಅಪ್ಪಣೆ ಕೊಡಿಸಿದ್ದಾರೆ. ಗೊರವ ಎಂದರೆ ಶಿವ. ಈ ಊರಿನಲ್ಲಿ ಸೋಮೇಶ್ವರ ದೇವಾಲಯವಿದೆ.

ಗುರು ಪ್ರಾಣೇಶದಾಸರ ದೌಹಿತ್ರ ಪುತ್ರರಾದ ಸುಪ್ರಸಿದ್ಧ ಸ್ವಾಮಿರಾಯರ ನೇತೃತ್ವದಲ್ಲಿ ಹನುಮಂತರಾಯರ ವಿದ್ಯಾಭ್ಯಾಸ ನಡೆಯಿತು. ಸ್ವಾಮಿರಾಯರು ಹನುಮಂತರಾಯರಿಗಿಂತ 8 ವರ್ಷ ಹಿರಿಯವರಾಗಿದ್ದು, ಹುಟ್ಟಿನಿಂದಲೇ ದೈವಭಕ್ತಿಯುಳ್ಳವರಾಗಿದ್ದರು. ಕನ್ನಡ, ಉರ್ದು, ಫಾರ್ಸಿ, ಮರಾಠಿಭಾಷೆಗಳಲ್ಲಿ ಪಾರಂಗತರಾಗಿ ವಕೀಲಿ ವೃತ್ತಿಯನ್ನವಲಂಬಿಸಿದ್ದರು. ವರದೇಂದ್ರ ಸ್ವಾಮಿಗಳ ಅನುಗ್ರಹದಿಂದ ಶ್ರೀಗೋಪಾಲದಾಸರ ಪರಂಪರೆಯಲ್ಲಿ ದಾಸ ದೀಕ್ಷೆಯನ್ನು ಪಡೆದು 'ಗುರು ಜಗನ್ನಾಥ ವಿಠಲಾಂಕಿತರಾದ' ಕೋಸಗಿ ಸ್ವಾಮಿರಾಜಾಚಾರ್ಯರಿಂದ 'ವರದೇಶ ವಿಠಲ' ಎಂಬ ಅಂಕಿತವನ್ನು ಪಡೆದಿದ್ದರು.ಹನುಮಂತರಾಯರನ್ನು ವಕೀಲ ಪರೀಕ್ಷೆ ಪಾಸುಮಾಡುವಂತೆ ಪ್ರೇರೇಪಿಸಿ ವಕೀಲಿ ವೃತ್ತಿಗೆ ಹಚ್ಚಿದವರು ಅವರೇ. ನಾಲ್ಕೈದು ವರ್ಷ ಇಬ್ಬರೂ ಕೂಡಿ ಕೆಲಸಮಾಡಿದ ಮೇಲೆ ಸ್ವಾಮಿರಾಯರು ತೀರ್ಥಯಾತ್ರೆಗಾಗಿ ಹೊರಟರು. ಆ ಹೊತ್ತಿಗೆ ಹನುಮಂತರಾಯರು ಒಳ್ಳೇ ಸುಪ್ರಸಿದ್ಧ ವಕೀಲರೆಂದು ಹೆಸರು ಗಳಿಸಿದ್ದರು ಇತರರಂತೆ ದ್ರವ್ಯ ಲಾಭವನ್ನು ಅಪೇಕ್ಷಿಸದೆ, ಅಧಿಕಾರಿಗಳ ಮೇಲೆ ತಮ್ಮ ಪ್ರಭಾವವನ್ನು ಬೀರಿ, ನೂರಕ್ಕೆ 85 ಕೇಸುಗಳನ್ನು ಬಗೆಹರಿಸಿ ಬಡವರಿಗ ಉಪಕಾರ ಮಾಡಿದರು. ಅಧಿಕಾರಿಗಳ ವಿರುದ್ಧ ಮೇಲಿನ ಕೋರ್ಟುಗಳಿಗೆ ಹೋಗಿ ದೇವಸ್ಥಾನಗಳ ಸ್ಥಳಗಳನ್ನು ದೇವಸ್ಥಾನಗಳಿಗೆ ಉಳಿಸಿದರು. ಮಾನ್ವಿ ಜಗನ್ನಾಥದಾಸರ ರಥದ ಕೇಸಿನಲ್ಲಿ ಆರು ವರ್ಷಗಳ ಪರ್ಯಂತ ಒಬ್ಬರೇ ಹೆಣಗಾಡಿ

ಶ್ರೀ ಜಿ. ಕೃಷ್ಣರಾವ್, ಎಂ. ಎ.

ಸುಮಾರು ಆರು ಸಾವಿರ ರೂಪಾಯಿಗಳನ್ನು ಖರ್ಚುಮಾಡಿ ರಥದ ಬಗೆಗಿನ ಕೇಸನ್ನು ಗೆದ್ದು ಲೋಕ ಪ್ರಸಿದ್ಧರಾದರು. ಆ ಕೇಸಿನ ತರುವಾಯ ಹನುಮಂತರಾಯರು ವಕೀಲಿ ವೃತ್ತಿಗೆ ತಿಲಾಂಜಲಿಯಿತ್ತರು.

ಗೋರಬಾಳ ಹನುಮಂತರಾಯರು ಮಾಡಿದ ಧಾರ್ಮಿಕ ಕಾರ್ಯಗಳು ಅನೇಕ. ೨೫ ವರ್ಷಗಳವರೆಗೆ ಬಿಡದೆ ತ್ರಿಕಾಲ ಸಂಧ್ಯಾವಂದನೆಯನ್ನಾಚರಿಸಿದರು. ಶ್ರೀವರದೇಂದ್ರರ ಉತ್ಸವ, ಆರಾಧನೆ, ಅಲಂಕಾರಗಳನ್ನು ಸುವ್ಯವಸ್ಥೆಯಿಂದ ಜರುಗುವಂತೆ ಮಾಡಿದರು. ತಮ್ಮ ಮನೆಯಲ್ಲಿದ್ದ ಸ್ವಂತ ಬೆಳ್ಳಿ ಪಾತ್ರೆಗಳನ್ನು ಶ್ರೀಗಳವರೆಗೆ ಅರ್ಪಿಸಿ ಲಿಂಗಸುಗೂರಿನಲ್ಲಿರುವ ಶ್ರೀವರದೇಂದ್ರ ತೀರ್ಥರ ವೃಂದಾವನಕ್ಕೆ ಸುಂದರವಾದ ಬೆಳ್ಳಿ ಕವಚವನ್ನು ಮಾಡಿಸಿದರು. ಸ್ವಾಮಿರಾಯರು ಶ್ರೀಗಳವರಿಗೆ ಮಾಡಿಟ್ಟ ಭೂವ್ಯವಸ್ಥೆಯನ್ನು ಸಾವಿರಾರು ರುಪಾಯಿ

ಖರ್ಚುಮಾಡಿ ತಮ್ಮ ವಶಕ್ಕೆ ತೆಗೆದುಕೊಂಡು ಅರ್ಚಕರ ಸ್ವಾಧೀನಮಾಡಿದರು. ಶ್ರೀ ಕುಪ್ಪೇರಾಯ ಪ್ರಾಣದೇವರ ಸೇವೆ ನಾನಾ ವಿಧವಾಗಿ ಜರುಗುವಂತೆ ಮಾಡಿದರು. ಪ್ರಾಣದೇವರ ರಥೋತ್ಸವ ಆರಂಭಿಸಿದ ಆರು ತಿಂಗಳ ತರುವಾಯ ಒಬ್ಬ ವೃದ್ಧ ಬ್ರಾಹ್ಮಣ ಸ್ವಪ್ನದಲ್ಲಿ ಬಂದು 'ನನಗೊಂದು ರಥವನ್ನು ಮಾಡಿಸಪ್ಪ' ಎಂದು ಹೇಳಿದ ನಂತೆ. ಹನುಮಂತರಾಯರು ಮನೆ ಕಟ್ಟಿಸುವ ಕಾಲಕ್ಕೆ ಅದೇ ವೃದ್ಧ ಬ್ರಾಹ್ಮಣ ಮತ್ತೊಮ್ಮೆ ದರ್ಶನವಿತ್ತು 'ಶ್ರೀ ಜಗನ್ನಾಥ ದಾಸರಿಗೆ ಒಂದು ರಥವನ್ನು ಮಾಡಿಸಬೇಕು' ಎಂದು ನೇರವಾಗಿ ಅಪ್ಪಣೆ ಕೊಡಿಸಿದನಂತೆ. ಆಗ ರಾಯರು 1926 ರ ಸುಮಾರಿಗೆ ಬಡಿಗೇರ ಈರಪ್ಪನನ್ನು ಕರೆಸಿಕೊಂಡು ಮನೆ ಯಲ್ಲಿಯೇ ರಥದ ಕೆಲಸವನ್ನು ಪ್ರಾರಂಭಿಸಿ, ನೂರು ವರ್ಷಗಳನಂತರ ರಥದ ಕೆಲಸವನ್ನು ಪೂರೈಸಿದರು. ಇಡೀ ಭರತ ಖಂಡದಲ್ಲಿ ಶಾಸ್ತ್ರಪ್ರಮಾಣಕ್ಕನುಸರಿಸಿ ಈ ರೀತಿಯಾಗಿ ತಯಾರಾದ ರಥ ಇದೇ ಮೊದಲ ನೆಯದೆಂದು ಹೇಳುವರು. ದಾಸ ಸಾಹಿತ್ಯದ ಪ್ರಚಾರ ಪ್ರಕಟಣೆಗಳಿಗಾಗಿ 'ಶ್ರೀ ವರದೇಂದ್ರ ಹರಿದಾಸ ಸಾಹಿತ್ಯ ಮಂಡಲ' ಲಿಂಗಸುಗೂರು' ಎಂಬ ಸಂಸ್ಥೆಯನ್ನು 1944 ನೆಯ ಇಸ್ವಿಯಲ್ಲಿ ಸ್ಥಾಪಿಸಿದರು. ರಾಯರು ಹಮ್ಮಿಕೊಂಡ ಯೋಜನೆಯನ್ನು ಅವರ ಅವರ ತರುವಾಯ ಮೇಲಿನ ಸಂಸ್ಥೆ ಮುಂದುವರೆಸಿಕೊಂಡು ಬರುತ್ತಿರುವುದೆಂಬ ಮಾತು ಸಂತಸದ ಸಂಗತಿ.

ದಾಸರ ಕೃತಿಗಳನ್ನು ಸಂಗ್ರಹಿಸಿ ಪ್ರಕಟ ಗೊಳಿಸುವುದರಲ್ಲಿ ಶ್ರೀ ಗೋರಬಾಳಹನು ಮಂತರಾಯರು ಕೈಗೊಂಡ ಪರಿಶ್ರಮ ಅನಿ ರ್ವಚನೀಯ. ದಾಸಸಾಹಿತ್ಯಕ್ಕಾಗಿ ಅವರು ಪಟ್ಟ ಪರಿಶ್ರಮ, ತೊಟ್ಟ ತಾಳ್ಮೆ. ತೋರಿದ ದಿಟ್ಟತನ, ಅಭೂತಪೂರ್ವ. ಯಾರನೆರವೂ ಇಲ್ಲದೆ ಪ್ರಾಣೇಶದಾಸರ ಕೀರ್ತನೆಗಳನ್ನು ಪ್ರಕಟಿಸಿದರು. ಪುರಂದರದಾಸರ, ವಿಜಯ ದಾಸರ ಕೃತಿಗಳನ್ನಲ್ಲದೆ ಎಲ್ಲ ದಾಸರ ಕೃತಿ ಗಳನ್ನು ಸಂಗ್ರಹಿಸುವ ಸಾಹಸದ ಕೆಲಸ ವನ್ನು ಏಕಾಕಿಯಾಗಿ ಮಾಡಿದರು. ತಮ್ಮ ಹಿರಿಯರಾದ ತಂದೆ ಗುರುಶ್ರೀಶ ಪ್ರಾಣೇಶ ಗುರುಗಳ ಅನುಗ್ರಹ ವಿಶೇಷದಿಂದ 'ಸುಮ ಧ್ವವಿಜಯ' ಕನ್ನಡ ಕಾವ್ಯಕ್ಕೆ 'ಮಂದ ಬೋಧಿನಿ' ಎಂಬ ಭಾವಾರ್ಥ ಬರೆದುದಾಗಿ ಅದನ್ನು ಸ್ವಾಹಂಕಾರ ಖಂಡನ ಪೂರ್ವಕ ನೈಚ್ಯಾನುಸಂಧಾನದಿಂದ ಸಾರಿದ್ದಾರೆ. ಷಟ್ಪದಿ ಛಂದಸ್ಸಿನಲ್ಲಿ ರಚಿತವಾಗಿ ಏಕಾದಶ ಶ್ಲೋಕಗಳಿಂದ ಶೋಭಿಸುವ 'ಸಮರ್ಪಣೆ' ರಾಯರು ಪ್ರೀತಿಸುವ ಪ್ರಮೇಯಗಳಲ್ಲಿ ಅತಿ ಮಹತ್ವದ್ದು. ಶ್ರೀವಿಜಯದಾಸರಿಂದ ರಚಿತವಾದ 'ಪ್ರಾರ್ಥನಾಭಾಗ ಸುಳಾದಿ ಗಳು' ಎಂಬ ಪುಸ್ತಕದ ಪ್ರಕಟಣೆಯ ಜೊತೆಗೆ 'ಮೋಕ್ಷಮಾರ್ಗ' ಎಂಬ ಶೀರ್ಷಿಕೆ ಯಲ್ಲಿ ದಾಸರ ಸುಳಾದಿಗಳನ್ನು ಒಂಬತ್ತು ಪುಸ್ತಕಗಳಾಗಿ ಪ್ರಕಟಿಸಿದರು. ದಿವಂಗತ ಪ್ರೊಫೆಸರ್ ಡಿ. ಕೆ. ಭೀಮಸೇನರಾಯರು ಶ್ರೀವರದೇಂದ್ರ ಹರಿದಾಸ ಸಾಹಿತ್ಯ ಮಂಡ ಲದ ಕಾರ್ಯದ ಜೊತೆಗೆ ರಾಯರನ್ನು ಶ್ಲಾಘಿಸಿದರು. ಮದರಾಸಿನ ಹಿಂದೂ ಪತ್ರಿ ಕೆಯ 13-1-1946 ರ ಸಂಚಿಕೆಯಲ್ಲಿ ಪ್ರಸಿ ಡೆನ್ಸಿ ಕಾಲೇಜಿನ ತತ್ವಜ್ಞಾನದ ಪ್ರೊಫೆಸ ರಾದ ಡಾ|| ನಾಗರಾಜ ಶರ್ಮಾ ಅವರು ಹೀಗೆ ಪ್ರಶಂಸೆಮಾಡಿದ್ದಾರೆ.

"ವಿಜಯದಾಸರ ವಿವಿಧ ಕಲಾಕೃತಿಗಳನ್ನು ಒಟ್ಟುಗೂಡಿಸುವ ಪರಿಶ್ರಮವನ್ನು ಕೈಕೊಂಡ, ಈ ಗ್ರಂಥದ ಸಂಪಾದಕರು ದ್ವೈತ ವೇದಾಂತಕ್ಕೆ ದಾಸವರ್ಗಕ್ಕೆ ಕನ್ನಡ ನುಡಿಗೆ ಕನ್ನಡ ಸಾಹಿತ್ಯಕ್ಕೆ ತಮ್ಮ ಅಮೂಲ್ಯವಾದ ಸೇವೆಯನ್ನು ಸಲ್ಲಿಸಿರುವರು. ಹರಿದಾಸ ಸಾಹಿತ್ಯದ ಸಂಗ್ರಹ ಮತ್ತು ಪ್ರಕಟಣೆಗಾಗಿ ಹನುಮಂತರಾಯರು ಪಟ್ಟ ಪರಿಶ್ರಮ ಮತ್ತು ಸಲ್ಲಿಸಿದ ಸೇವೆಯನ್ನು ಕಣ್ಣಾರೆ ಕಂಡು ಶ್ರೀ ಪಾಂಡುರಂಗರಾವ ದೇಸಾಯಿ ಡೈರೆಕ್ಟರ್ ಎಪಿಗ್ರಾಫಿಕಲ್ ಉದಕಮಂಡಲ(ನೀಲಗಿರಿ)ಅವರು 7-3-1951 ರಲ್ಲಿ 'ಶ್ರೀ ವಿಜಯದಾಸರು' ಎಂಬ ಗ್ರಂಥಕ್ಕೆ ಬರೆದ ಮುನ್ನುಡಿಯಲ್ಲಿ ರಾಯರನ್ನು ಮುಕ್ತ ಕಂಠದಿಂದ ಹೀಗೆ ಹೊಗಳಿದ್ದಾರೆ.

"ಲಿಂಗಸಗೂರಿನ ಶ್ರೀ ಗೋರಬಾಳ ಹನುಮಂತರಾಯರು ತಮ್ಮ ಜೀವನದ ಮೂವತ್ತು ವರ್ಷಗಳನ್ನು ಕಾಲಗರ್ಭ ವಶವಾಗಿದ್ದ ಹರಿದಾಸಸಾಹಿತ್ಯ ಸಂಪದವನ್ನು ಹೊರತೆಗೆಯಲು ಮೀಸಲಿಟ್ಟು ದುಡಿದ ಮಹಾನುಭಾವರು. ಈ ಸಾಹಿತ್ಯದಲ್ಲಿನ ಹರಡಿ ಹೋದ ಮೂಲಗಳನ್ನು ವ್ಯಾಪಕವಾಗಿ ಸಂಗ್ರಹಿಸಿ ವಿಶೇಷ ಎಚ್ಚರಿಕೆಯಿಂದ ಅಧ್ಯಯನ ಮಾಡಿ ಅನೇಕ ಹೊತ್ತಗೆಗಳನ್ನು ಪ್ರಕಟಿಸಿದರು. ಅವರು ಈ ದಿಸೆಯಲ್ಲಿ ಸಲ್ಲಿಸಿರುವ ಸೇವೆ ಅತ್ಯಂತ ಸ್ಮರಣೀಯವಾದದ್ದು......"

ಶ್ರೀ ಹನುಮಂತರಾಯರ ದಾಸಸಾಹಿತ್ಯವನ್ನು ಆಮೂಲಾಗ್ರವಾಗಿ ಅಭ್ಯಸಿಸಿದ್ದಾರೆ. ಅವರ ಸಂಗ್ರಹ ಪ್ರವೃತ್ತಿ ಅದ್ಭುತವಾದದ್ದು. ಅದರ ಫಲವಾಗಿ ಅವರು ಇಂದಿನವರೆಗೆ ಸುಮಾರು ೪೦ ಕ್ಕೂ ಮೇಲ್ಪಟ್ಟು ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಇನ್ನೂ ೫೦–೬೦ ಪುಸ್ತಕಗಳು ಆಗುವಷ್ಟು ಹರಿದಾಸ ವಾಙ್ಮಯ ಭಂಡಾರವು ಶ್ರೀವರದೇಂದ್ರ ಹರಿದಾಸ ಸಾಹಿತ್ಯ ಮಂಡಲದಲ್ಲಿದೆ. ಶ್ರೀ ಪ್ರಾಣೇಶದಾಸರೇ ಮೊದಲಾದವರಿಂದ ವಿರಚಿತವಾದ ಪ್ರಾಕೃತ ವಾಯುಸ್ತುತಿ, ಶ್ರೀ ಕೃಷ್ಣ ಚರಿತ್ರೆ, ಅನಿರುದ್ಧ ವಿಲಾಸ ಮೊದಲಾದ ಕೃತಿಗಳನ್ನು ಪ್ರಕಟಿಸಿದರು. ಭಾಮಿನಿ ಷಟ್ಪದಿಯಲ್ಲಿ ಬರೆದ ಶ್ರೀ ಸುಮಧ್ವವಿಜಯ (೬ ಭಾಗಗಳಲ್ಲಿ) ಅಣುಮಧ್ವವಿಜಯ (ಷಟ್ಪದಿ) ಎಲ್ಲ ಹಿರಿಯ ದಾಸರ ಕೀರ್ತನೆಮಾಲೆಗಳು, ಶ್ರೀ ವಿಜಯದಾಸರಂಥ ಮಹಾನುಭಾವರು ರಚಿಸಿದ ಸ್ತೋತ್ರಭಾಗ, ಪ್ರಮೇಯಭಾಗ, ಉಪಾಸನಾಭಾಗ. ಸಾಧನಾಭಾಗ, ಕ್ಷೇತ್ರಮಹಿಮಾಭಾಗ, ಸೃಷ್ಟಿ ಪ್ರಕರಣಕ್ಕೆ ಸಂಬಂಧಿಸಿದ ಭಾಗ ಹೀಗೆ ಬಹು ವ್ಯಾಪಕ ಕ್ಷೇತ್ರವನ್ನಾವರಿಸಿದ ಅನೇಕ ಸುಳಾದಿಗಳನ್ನು ಪರಿಶೋಧಿಸಿ ಬೇರೆ ಬೇರೆ ಗ್ರಂಥಗಳ ರೂಪದಲ್ಲಿ ಪ್ರಕಟಗೊಳಿಸಿದ್ದಾರೆ. ಇವುಗಳಲ್ಲದೆ ಸುಮಾರು ೧೪–೧೫ ಗದ್ಯ ಗ್ರಂಥಗಳನ್ನು ಪ್ರಕಟಿಸಿದ್ದಾರೆ. ಶ್ರೀ ಗೋಪಾಲದಾಸರು ತೆಗೆದ ತತ್ತ್ವಾಭಿಮಾನಿ ದೇವತೆಗಳ ಚಿತ್ರಣವನ್ನೊಳಗೊಂಡ ಮಾನವನ ಆಕೃತಿಯ ವರ್ಣರಂಜಿತವಾದ ಚಕ್ರಾಬ್ಜ ಮಂಡಲ, ಬ್ರಹ್ಮಾಂಡಪಟ, ಪಿಂಡಾಂಡ ಪಟ, ವಿರಾಡ್ರೂಪ ಮುಂತಾದ ವಿವಿಧ ಚಿತ್ರಪಟಗಳನ್ನು ಹನುಮಂತರಾಯರು ಬಹು ಪ್ರಯಾಸದಿಂದ ದೊರಕಿಸಿ, ಸರಿಯಾದ ವರ್ಣಮಿಶ್ರಣದೊಂದಿಗೆ ದೊಡ್ಡ ಪ್ರಮಾಣದಲ್ಲಿ ಮುದ್ರಿಸಿ ಅವಿಸ್ಮರಣೀಯ ಉಪಕಾರಮಾಡಿದ್ದಾರೆ. ಸಂಧ್ಯಾಮಹಾತ್ಮೆಯ ಬಗ್ಗೆ ಉಲ್ಲೇಖಿಸಿದ್ದಾರೆ. 'ಹರಿಕಥಾಮೃತಸಾರ'ದ ಸಂಸ್ಕೃತ, ಕನ್ನಡ ವ್ಯಾಖ್ಯಾನಗಳನ್ನು ಸಂಗ್ರಹಿಸಿ 'ಪಂಚರತ್ನ ಪ್ರಕಾಶಿಕಾ'ಎಂಬುದಾಗಿ ಆರು ಭಾಗಗಳಲ್ಲಿ ಪ್ರಕಟಿಸಿದ್ದಾರೆ. ಹರಿದಾಸಸಾಹಿತ್ಯದ್ವೈಮಾಸಿಕದ ಮುಖಾಂತರವೂ ಅವರು ದಾಸಸಾಹಿತ್ಯದ ಸೇವೆಗೈಯ್ದಿದ್ದಾರೆ. ಮುಪ್ಪು ಆವರಿಸಿ ಎರಡು ವರ್ಷಗಳಿಂದ ದೃಷ್ಟಿ ಕಾಣದಂತಾದರೂ, ರೋಗಗ್ರಸ್ತರಾದರೂ ಸೋಲನರಿಯದ ಶೂರರಾಗಿ ದಣಿವನರಿಯದ ಧೀರರಾಗಿ ಮತ್ತೆ ಮೂರು ಪುಸ್ತಕಗಳನ್ನು ಪ್ರಕಟಿಸುವುದು ದಾಸಸಾಹಿತ್ಯದ ಬಗೆಗಿರುವ ಅವರ ಶ್ರದ್ಧೆ ಮತ್ತು ಭಕ್ತಿಗಳನ್ನು ಎತ್ತಿ ತೋರಿಸುತ್ತದೆ. 'ಸೃಷ್ಟಿ ಪ್ರಕರಣ ಸುಳಾದಿ' ಪುಸ್ತಕದ 'ಬಿನ್ನಹ' ದಲ್ಲಿ ತಮಗಾದ ಕಷ್ಟಗಳನ್ನು ನಿರ್ವಂಚನೆಯಿಂದ ತೋಡಿಕೊಂಡಿದ್ದಾರೆ. ಅಯೋಧ್ಯಾದ ಸಂಸ್ಕೃತ ಕಾರ್ಯಾಲಯದ ಅಧ್ಯಕ್ಷರು ಶ್ರೀ ಹನುಮಂತರಾಯರಿಗೆ 'ವಿದ್ವಾನ್ ಸಾಹಿತ್ಯ ಸೇವಾಲಂಕಾರ' ಎಂಬ ಬಿರುದನ್ನು ದಯಪಾಲಿಸಿದ್ದಾರೆ. ದಿನಾಂಕ 3-2-1964 ರಂದು ರಾಯಚೂರಿನ ಕರ್ನಾಟಕ ಸಂಘವು ದಾಸಸಾಹಿತ್ಯದ ಪ್ರಚಾರ ಪ್ರಕಟಣೆಗಳಿಗಾಗಿ ಅವರಿ 'ಮಾನಪತ್ರ' ಸಲ್ಲಿಸಿದೆ. ದಿನಾಂಕ 24-11-1965 ರಂದು ಟಿ. ಎನ್. ವೆಂಕಣ್ಣಯ್ಯನವರ ಮಿತ್ರರಾದ ಬಳ್ಳಾರಿಯ ಪ್ರೊ. ಬಿ. ನಾಗೇಶರಾವ್ ಅವರು ಪತ್ರದ ಮೂಲಕ ಗೌರವವನ್ನು ಸೂಚಿಸಿದ್ದಾರೆ. ಶ್ರೀ ಶ್ರೀ ಭಂಡಾರಕೇರಿ ಶ್ರೀಗಳವರು 'ದಾಸ ಧುರೀಣ' ರೆಂದು ಕರೆದಿದ್ದಾರೆ. ಅಪರೋಕ್ಷ ಜ್ಞಾನಿಗಳೆಂದು ಖ್ಯಾತರಾದ ಶ್ರೀ ಕೋಸಗಿ ದಾಸಾರ್ಯರು 'ಸುಂದರ ವಿಠಲ' ಎಂಬ ಅಂಕಿತವನ್ನಿತ್ತು ಅನುಗ್ರಹಿಸಿದ್ದಾರೆ. ಈ ಅಂಕಿತದಿಂದ ಹನುಮಂತರಾಯರು ಅನೇಕ ದೇವರ ನಾಮಗಳನ್ನು ಮತ್ತು ಹಲಕೆಲವು ಷಟ್ಪದಿ ಸಾಂಗತ್ಯ ಕಾವ್ಯಗಳನ್ನು ರಚಿಸಿದ್ದಾರೆ. 'ಆದಿತ್ಯ ಪುರಾಣದ ವೆಂಕಟೇಶ ಮಹಾತ್ಮೆ' ಯನ್ನು ಸುಳಾದಿಗಳಿಗೆ ಅಳವಡಿಸಿ ರಚಿಸಿದ ಅವರ ಕೃತಿ ಉಲ್ಲೇಖನೀಯವಾದುದು.

ಶ್ರೀ ಗೋರಬಾಳ ಹನುಮಂತರಾಯರು ಕನ್ನಡನಾಡಿಗೆ, ವಿಶೇಷವಾಗಿ ಭಾಗವತರಿಗೆ ಸಲ್ಲಿಸಿದ ಸೇವೆ ಬಹುಮುಖವಾದುದು. ಎಲ್ಲರಂತೆ ಮಾನವರಾಗಿ ಬಾಳಿದ ಶ್ರೀ ಹನುಮಂತರಾಯರ ಬದುಕಿನಲ್ಲಿ ಬರಿ ಸಿಹಿಫಲಗಳನ್ನೇ ತಿನ್ನಲಿಲ್ಲ. ಅನೇಕ ತೊಂದರೆಗಳಿಗೀಡಾಗಿ ಸಾಮಾನ್ಯರು ಎದೆಯೊಡೆದುಕೊಳ್ಳಬಹು

# ಶ್ರೀ ವೇಂಕಟೇಶ್ವರಸ್ವಾಮಿ ದೇವಾಲಯ

## ಮಂಗಾಪುರ.

ಶ್ರೀ ವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ವಿವಾಹವಾದ ಬಳಿಕ ತಿರುಮಲೆಗೆ ಆಗಮಿಸುವ ಮುನ್ನ ಆರುತಿಂಗಳಕಾಲ ತಂಗಿದ್ದ ಸ್ಥಳ. ತಿರುಮಲೆಯಲ್ಲಿನ ಧ್ರುವಮೂರ್ತಿಗಿಂತ 2 ಅಡಿ ಹೆಚ್ಚು ಎತ್ತರದ ಧ್ರುವಮೂರ್ತಿ ಇಲ್ಲಿದ್ದು, ಈ ಗುಡಿಯನ್ನು ಹಾದು ತಿರುಮಲೆಗೆ ಮೆಟ್ಟಿಲ ಮೂಲಕ ಏರಬಹುದು. ಚಂದ್ರಗಿರಿ ಹಾಗೂ ತಿರುಪತಿಗಳಿಂದ ಬಸ್ ಸೌಕರ್ಯವಿದೆ.

### ದರ್ಶನ ಹಾಗೂ ಸೇವಾ ವಿವರಗಳು

| | ಭಾನು, ಸೋಮ, ಮಂಗಳ, ಬುಧ, ಗುರು ಹಾಗೂ ಶನಿವಾರಗಳ ಕಾರ್ಯಕ್ರಮ. | | ಶುಕ್ರವಾರಗಳಲ್ಲಿ |
|---|---|---|---|
| ಸುಪ್ರಭಾತ | ಪ್ರಾ 5–00 ಪ್ರಾ 5–30 | | ಪ್ರಾ 5–00 ಪ್ರಾ 5–30 |
| ವಿಶ್ವರೂಪ ಸರ್ವದರ್ಶನ | ಪ್ರಾ 5–30 ಪ್ರಾ 6–00 | | ಪ್ರಾ 5–30 ಪ್ರಾ 6–00 |
| ತೋಮಾಲ, ಕೊಲುವು ಪಂಚಾಂಗಶ್ರವಣ | ಪ್ರಾ 6–00 ಪ್ರಾ 6–30 | | ಪ್ರಾ 6–00 ಪ್ರಾ 6–30 |
| ಸಹಸ್ರನಾಮಾರ್ಚನೆ | ಪ್ರಾ 6–30 ಪ್ರಾ 7–00 | | ಪ್ರಾ 6–30 ಪ್ರಾ 7–00 |
| ಮೊದಲನೇ ಗಂಟೆ | ಪ್ರಾ 7–00 ಪ್ರಾ 7–30 | | ಪ್ರಾ 7–00 ಪ್ರಾ 7–30 |
| ಸರ್ವದರ್ಶನ | ಪ್ರಾ 7–30 ಪ್ರಾ 10–00 | *ಅಭಿಷೇಕ | ಪ್ರಾ 7–30 ಪ್ರಾ 8–30 |
| | | ಸಮರ್ಪಣ | ಪ್ರಾ 8–30 ಪ್ರಾ 9–30 |
| 2ನೇ ಅರ್ಚನೆ 2ನೇ ಗಂಟೆ | ಪ್ರಾ 10–00 ಪ್ರಾ 10–30 | | ಪ್ರಾ 9–30 ಪ್ರಾ 10–30 |
| *ಆರ್ಜಿತ ಕಲ್ಯಾಣೋತ್ಸವ | ಪ್ರಾ 10–30 ಮ 12–00 | | ಪ್ರಾ 10–30 ಮ 12–00 |
| ಸರ್ವದರ್ಶನ | ಪ್ರಾ 10–30 ಸಂ 6–30 | | ಪ್ರಾ 10–30 ಸಂ 6–30 |
| ರಾತ್ರಿ ಕೈಂಕರ್ಯ ರಾತ್ರಿ ಗಂಟೆ | ಸಂ 6–30 ರಾ 7–00 | | ಸಂ 6–30 ರಾ 7–00 |
| ಸರ್ವದರ್ಶನ | ರಾ 7–00 ರಾ 8–45 | | ರಾ 7–00 ರಾ 8–45 |
| ಏಕಾಂತ ಸೇವೆ | ರಾ 8–45 ರಾ 9–00 | | ರಾ 8–45 ರಾ 9–00 |

| | |
|---|---|
| *ಆರ್ಜಿತ ಕಲ್ಯಾಣೋತ್ಸವ ಶುಲ್ಕ | ರೂ – 150=00 |
| *ಅಭಿಷೇಕ (ಶುಕ್ರವಾರಗಳಲ್ಲಿ) ಶುಲ್ಕ | ರೂ – 100=00 |
| ಅರ್ಚನೆ | ರೂ – 3=00 |
| ಆರತಿ | ರೂ – 1=00 |
| ತೆಂಗಿನಕಾಯಿ ವರ್ತನೆ | ರೂ – 0=50 |
| ಅಭಿಷೇಕಾನಂತರ ದರ್ಶನ | ರೂ – 3=00 |

ದಾದಷ್ಟು ಕಹಿಫಲಗಳನ್ನೂ ಉಂಡರು. ಆದರೂ ಕಷ್ಟಗಳಿಗೆ ಕುಗ್ಗದೆ, ತೊಂದರೆಗಳಿಗೆ ಅಂಜದೆ ಶ್ರೀ ವಿಜಯದಾಸರು 'ಶ್ರೀ ಹರಿದಾಸ ಸುಳಾದಿ' ಯಲ್ಲಿ ಹೇಳಿದಂತೆ ಶ್ರೀಹರಿಯನ್ನೇ ದೃಢವಾಗಿ ನಂಬಿಕೊಂಡು 'ಉಟ್ಟುದಕ್ಕಿಂತ ಮೇಲೆ। ಇಟ್ಟುದಕ್ಕಿಂತ ಮೇಲೆ। ತೊಟ್ಟುದಕ್ಕಿಂತ ಮೇಲೆ। ವಿಠಲನ ಸ್ಮರಣೆ' ಎಂದು ಶ್ರೀಹರಿಯ ಧ್ಯಾನದಲ್ಲಿ ನಿರತರಾಗಿ ಹರಿದಾಸರ ಸೇವೆಮಾಡುತ್ತ, ದಾಸಸಾಹಿತ್ಯದ ಕೃತಿಗಳ ವೈಭವವನ್ನು ಮೆರೆಸುತ್ತ, ಜನತಾ ಜನಾರ್ದನರ ಸೇವೆ ಮಾಡುತ್ತ ಶ್ರೀಹರಿಚರಣಗಳಿಗೆ ಪ್ರೀತರಾದರು.

ಗೋರಬಾಳ ಹನುಮಂತರಾಯರು 20ನೇ ಶತಮಾನದಲ್ಲಿ ರಾಯಚೂರು ಜಿಲ್ಲೆಯ ಹರಿದಾಸಸಾಹಿತ್ಯವನ್ನು ಉದ್ಧಾರಮಾಡಿದರು. ತನ್ಮೂಲಕ ತಾವೇ ಉದ್ಧೃತರಾದರು. ದಾಸಸಾಹಿತ್ಯದ ಉದ್ಧೃತಿಗಾಗಿ ತಮ್ಮ ತನುಮನಧನಗಳನ್ನೆಲ್ಲ ಅರ್ಪಿಸಿ ಕೊನೆಯುಸಿರಿನವರೆಗೂ ದಣಿವಿಲ್ಲದೆ ದುಡಿದರು. ಅವರು ಸ್ವತಃ ಕೃತಿರಚನೆ ಮಾಡುವುದಕ್ಕಿಂತಲೂ, ತಮಗಿಂತಲೂ ಹಿರಿಯರ ಅಪರೋಕ್ಷ ಜ್ಞಾನಿಗಳ ಕೃತಿಗಳನ್ನು ಶೋಧಿಸಿ, ಸಂಗ್ರಹಿಸಿ, ಬೆಳಕಿಗೆ ತರುವುದೇ ಮಹತ್ತಾದ ಭಗವತ್ಪ್ರೀತಿಕಾರಕ ಸೇವೆಯೆಂದು ಭಾವಿಸಿದ್ದರು. ಅವರ ಸೇವೆಯನ್ನು ಕೊಂಡಾಡಲು ಶಬ್ದಗಳು ಸೋಲುತ್ತವೆ; ಲೇಖನಿ ನಮ್ರತೆಯಿಂದ ಶರಣಾಗತವಾಗುತ್ತದೆ. ಇಂತಹ ಮಹಾಮಹಿಮರ ನಿರ್ಯಾಣದಿಂದ ರಾಯಚೂರು ಜಿಲ್ಲೆ ಹರಿದಾಸ ಸಾಹಿತ್ಯದ ಒಬ್ಬ ಸಮರ್ಥ ಹರಿಕಾರನನ್ನು ಕಳೆದುಕೊಂಡಂತಾಗಿದೆ.



# ದಶಾವತಾರ

—ಶ್ರೀನಿವಾಸಮಠದ ಬಿ. ಎಸ್. ಸಿ.

ತಿರುಪತಿ ತಿಮ್ಮಪ್ಪನ ಅನಂತಾನಂತ ರೂಪಗಳನ್ನು ನಾನಾಬಗೆಯಲ್ಲಿ, ನಾನಾ ಭಾವಗಳಲ್ಲಿ ನಮ್ಮ ಹರಿದಾಸರು ಅನಂತವಾಗಿ ವರ್ಣಿಸಿದ್ದಾರೆ. ಅದರಲ್ಲೂ ವಿಶೇಷವಾಗಿ 'ದಶಾವತಾರದ ವರ್ಣನೆ' ಯನ್ನು ಮಾಡದ ಹರಿದಾಸರೇ ಇಲ್ಲವೆನ್ನಬಹುದು. ಪ್ರತಿಯೊಬ್ಬರೂ ಪುರಾಣಾಂತರ್ಗತವಾದ ಕಥೆಗಳ ಆಧಾರದಿಂದ ಹರಿಭಕ್ತಿಸುಧೆಯ ಹೊನಲನ್ನೇ ಹರಿಸಿದ್ದಾರೆ. ವಿಷಯವು ಒಂದೇ ಎನಿಸಿದರೂ ಅವರವರ ಅನುಭವ, ಸಾಕ್ಷಾತ್ಕಾರ ಇತ್ಯಾದಿಗಳು ಬೇರೆ ಬೇರೆಯಾಗಿವೆ. ದುಷ್ಟನಿಗ್ರಹ, ಶಿಷ್ಟಪರಿಪಾಲನೆಗಾಗಿ ಪರಮಾತ್ಮನು "ಮತ್ಸ್ಯ, ಕೂರ್ಮ, ವರಾಹ, ನರಸಿಂಹ, ವಾಮನ, ಪರಶುರಾಮ, ರಾಮ, ಕೃಷ್ಣ, ಬುದ್ಧ, ಕಲ್ಕಿ," ಹೀಗೆ ಹತ್ತು ಅವತಾರಗಳನ್ನು ಎತ್ತಿರುವನು ಹಾಗೂ ಪರಮಾತ್ಮನ ಲೀಲಾವಿಲಾಸಗಳಲ್ಲಿ 'ದಶಾವತಾರದ ಲೀಲೆ'ಯು ಹೆಚ್ಚಿನ ಮಹತ್ವ ಪಡೆದಿದೆ. ಅಂತೆಯೇ ನಮ್ಮ ಹರಿದಾಸರು ದಶಾವತಾರದ ವರ್ಣನೆಯನ್ನು ಸರ್ವತ್ರ ಮನದಣಿಯುವಂತೆ ವರ್ಣಿಸಿದ್ದು ಕಂಡು ಬರುತ್ತದೆ

ಶ್ರೀಪ್ರಾಣೇಶದಾಸರು ಪುರಾಣಗಳಲ್ಲಿ ಉಕ್ತವಾದ ವಿಷಯವನ್ನು ಆಯ್ದು ದಶಾವತಾರಗಳ ಕಾಲ, ದಿನಗಳನ್ನು ಕೆಳಗಿನಂತೆ ವರ್ಣನೆಮಾಡಿರುವರು.

ಕೃತಯುಗ ಪ್ರಭವ ಮಧು ಶುದ್ಧ ಪ್ರತಿಪದ ಜಲಧಿಸುತೆವಾರ ರೇವತಿ ವಿಷ್ಕಂಭ ಹಗಲು ಸಂಯುತ-ಹನ್ನೆರಡು ಗಳಿಗೆಗವತರಿಸಿ; ಶ್ರೀಮತ್ಸ್ಯ

ಹತ ಮಾಡಿ ತಮನೆಂಬನಾ ।
ಚತುರಾಸ್ಯ ವೈವಸ್ವತಗೊಲಿದು
ಮೆರೆದ ನೀ ।
ಕ್ಷಿತಿಯೊಳಗೆ ಮತ್ತಾಯುಗದಿ ಕಾರ್ಯ
ರೂಪದಿಂ ।
ಚ್ಯುತಿರಹಿತನವತಾರಮಾಡಿ ಮಾಡಿ
ದುಪಕಾರ ಮತಿವಂತರಿಗೆ ಪೇಳುವೆ॥ ..

ಇನ್ನು ಮೊದಲನೆಯದಾಗಿ ಶ್ರೀಮನ್ ಮಧ್ವಾಚಾರ್ಯರು ತಮ್ಮ ಕೃತಿ 'ದ್ವಾದಶ ಸ್ತೋತ್ರ'ದ ಆರು ಹಾಗೂ ಒಂಬತ್ತನೆಯ ಅಧ್ಯಾಯಗಳಲ್ಲಿ ಬೇರೆ ಬೇರೆ ಧಾಟಿಗಳಲ್ಲಿ 'ದಶಾವತಾರ'ದ ವರ್ಣನೆಯನ್ನು ಮಾಡಿರುತ್ತಾರೆ–ಆರನೆಯ ಅಧ್ಯಾಯದಲ್ಲಿ ಬರುವ ವರ್ಣನೆ ಹೀಗೆ ಇದೆ.

ಮತ್ಸ್ಯಕರೂಪ ಲಯೋದ ವಿಹಾರಿನ್
ವೇದ ವಿನೇತ್ರ ಚತುರ್ಮುಖವಂದ್ಯ ।
ಕೂರ್ಮಸ್ವರೂಪಕ–ಮಂದರಧಾರಿನ್
ಲೋಕವಿಧಾರಕ–ದೇವವರೇಣ್ಯ ।

....... .. ....... .. ... . ........

ದೈತ್ಯವಿಮೋಹಕ–ನಿತ್ಯ ಸುಖಾದೇ
ದೇವ ಸುಬೋಧಕ ಬುದ್ಧಸ್ವರೂಪ ।
ದುಷ್ಟಕುಲಾಂತಕ–ಕಲ್ಕಿಸ್ವರೂಪ
ಧರ್ಮವಿವರ್ಧನ ಮೂಲಯುಗಾದೇ ॥

ಮತ್ತು ಒಂಬತ್ತನೆಯ ಅಧ್ಯಾಯದಲ್ಲಿ ಬರುವ ವರ್ಣನೆ ಹೀಗಿದೆ—

ಪ್ರಜಲಿತ ಲಯ ಜಲವಿಹರಣ ಶಾಶ್ವತ
ಸುಖಮಯ ಮೀನ ಹೇ ಭವ
ಮಮ ಶರಣಮ್ ।
ಶುಭತಮ ಕಥಾಶಯ ಪರಮ
ಸದೋದಿತ ಜಗದೇಕ ಕಾರಣ–
—ರಾಮ ರಮಾರಮಣ–

.... ... .. ....................

ಕಲಿಮಲಹುತವಹ ಸುಭಗ ಮಹೋತ್ಸವ ಶರಣದಕಲ್ಕೀಶ ಭವಮಮ ಶರಣಮ್, । ಶುಭತಮ ತಥಾಶಯ ಪರಮ ಸದೋದಿತ ಜಗದೇಕಕಾರಣ ರಾಮ ರಮಾರಮಣ. ॥



ಈ ದಶಾವತಾರದ ವರ್ಣನೆಯೇ ಕನ್ನಡ ದಾಸಸಾಹಿತ್ಯಕ್ಕೆ—ಹೆಚ್ಚಿನ ಸ್ಫೂರ್ತಿಯನ್ನಿತ್ತಿರುವುದೆಂದು ಹೇಳಬಹುದು.

ಶ್ರೀವಾದಿರಾಜ ಪೂಜ್ಯಚರಣರು ಮಂಗಳ ಪದ್ಯವೊಂದರಲ್ಲಿ ಆ ಪರಮಾತ್ಮನ ದಶಾವತಾರದ ವರ್ಣನೆಯನ್ನು ಹೀಗೆ ಮಾಡಿದ್ದಾರೆ.

'ವೇದವ ತಂದು ಬೆಟ್ಟವ ಪೊತ್ತು
ಧರಣಿಯ
ಸಾಧಿಸಿ ಕಂಭದೊಳುದಿಸಿದಗೆ
ಭೂದಾನವ ಬೇಡಿ ನೃಪರ ಸಂಹರಿಸಿದ
ಆದಿಮೂರುತಿಗಾರುತಿಯೆತ್ತಿರೇ ।

ಇಂದುವದನೆ ಸೀತೆಸಹಿತಲರಣ್ಯದಿ
ನಂದ ಗೋಕುದಲ್ಲಿ ನಲಿದವಗೆ
ಮಂದಗಮನೆಯರ ಮುಂದೆ
ನಿರ್ವಾಣದಿ
ನಿಂದ ಮೂರುತಿ ಗಾರುತಿಯತ್ತಿರೇ
ತುರಗವನೇರಿ ದುಷ್ಟರ ಸೀಳಿ ಸುಜನರ
ಪೊರೆವ ಮಂಗಳ ಹಯವದನನಿಗೆ ।
ವರದ ವೇಲಾಪುರ ಚೆನ್ನಿಗರಾಯನ ।
ಚರಣಕಮಲಕಾರುತಿಯೆತ್ತಿರೇ ॥

ಶ್ರೀಪಾದರಾಯರು ಪರಮಾತ್ಮನಿಗೆ 'ಜೋಗುಳ'ಹಾಡುತ್ತಲೇ ಈ ದಶಾವತಾರದ ವರ್ಣನೆಯನ್ನು ಅಂದವಾಗಿ ಮಾಡಿದ್ದಾರೆ;

ತಮನ ಮರ್ದಿಸಿ ವೇದತತಿಗಳನು ತಂದೆ
ಸುಮನಸರಿಗಾಗಿ ಮಂದರ ಪೊತ್ತು ನಿಂದೆ
ಕ್ಷಮೆಗಾಗಿ ಹೋಗಿ ಹಿರಣ್ಯಕನ ಕೊಂದೆ
ನಮಿಸಿ ಕರೆದರೆ ಕಂಬದಿಂ ಹೊರಟು
ಬಂದೆ,

ತರಳನಾಗಿ ಬಲಿಯ ದಾನವ ಬೇಡಿದೆ
ಪರಶುಧರಿಸಿ ಕ್ಷತ್ರಿಯರ ಸವರಿದೆ
ದುರಳ ರಾವಣನ ಶಿರವ ಚೆಂಡಾಡಿದೆ
ಚರಿಸಿ ಮನೆಗಳ ಪಾಲು ಮೊಸರನ್ನೇ
ಕುಡಿದೆ

ಬುದ್ಧನಾಗಿ ಪತಿವ್ರತೆಯರ ನಾಳಿದೆಯಲ್ಲ
ಮುದ್ದು ತುರಗವನೇರಿ ಕಲ್ಕ್ಯನಾದ್ಯಲ್ಲ
ಪದ್ಮನಾಭ ಸಿರಿ ಭಕ್ತವತ್ಸಲ
ನಿದ್ರೆಯ ಮಾಡಯ್ಯ ಶ್ರೀರಂಗವಿಠಲ ॥

—ನಿದ್ರೆಗೈಯುತ್ತಿರುವ ಆ ಹರಿಯನ್ನು "ಬೂಪಾಳಿ"ರಾಗದಿಂದ ಹಾಡಿ ಎಬ್ಬಿಸುವಾಗಲೂ 'ದಶಾವತಾರ' ವರ್ಣನೆಯೇ ಶ್ರೀಪುರಂದರದಾಸರಿಗೆ ಅಚ್ಚು ಮೆಚ್ಚು.

ಏಳಯ್ಯ ಬೆಳಗಾಯಿತು,

ವೇದವನು ತರಲೇಳು, ಮಂದರವ
ಪೊರಲೇಳು,
ಭೇದಿಸುತಲಿ ಅಸುರರನು ದಾಡಯಿಂದ
ಏಳು
ಕಾಡಿ ಹಿರಣ್ಯಕನ ಕರುಳು ಕೊರಳೊಳು
ಧರಿಸೇಳು
ಕಾಯ್ದು ಬಲಿ ಬಾಗಿಲೊಳು ।

ಭೇದಿಸಿ ಭೂಮಿ ತ್ರಿಪಾದದಿಂದಳೆಯೇಳು
ಭೇದಿಸಿ ಕ್ಷತ್ರಿಯರ ಕೊಡಲಿಂದ ಕಡಿ
ಯೇಳು
ಸಾಧಿಸಿ ಶರಧಿಯನು ಸೇತುವೆಯ
ಕಟ್ಟೇಳು.
ನಂದಗೋಪನ ಉದರದಿ ।

ಪುರ ಮೂರು ಗೆಲಬೇಕು । ಅರವಿಯನೆ
ತಳೆಯೇಳು
ದುರುಳನ ಕೊಲ್ಲಬೇಕು ತುರಗವಾಹನ
ನಾಗು ॥
ಪರಿಪರಿಯ ಕೆಲಸಗಳ ಮಾಡಲು
ದ್ಯೋಗಿಸಿ ।
ಮರೆದು ನಿದ್ರೆಯಗೆಯ್ವರೇ. ॥

ಏಳಯ್ಯ ಬೆಳಗಾಯಿತು—ಎನ್ನುತ್ತಾರೆ.

ಶ್ರೀ ಕನಕದಾಸರು ಒಂದು ಜನಪದ ಗೀತೆಯಲ್ಲಿ ಪರಮಾತ್ಮನ 'ದಶಾವತಾರದ' ಸ್ತೋತ್ರವನ್ನು ಬಹು ಸ್ವಾರಸ್ಯಮಯವಾಗಿ ಮಾಡಿದ್ದಾರೆ—

ದೇವಿ ನಮ್ಮ ದ್ಯಾವರು ಬಂದಾರೆ
ಬನ್ನಿರೇ ನೋಡಬನ್ನಿರೇ । ಪ ।
ಕೆಂಗಣ್ಣ ಮೀನನಾಗಿ ನಮ್ಮರಂಗ
ಗುಂಗಾಡಿ ಸೋಮನ ಕೊಂದಾನಮ್ಮ ।
ಗುಂಗಾಡಿ ಸೋಮನ ಕೊಂದು ವೇದವ
ಬಂಗಾರದೊಡಲಿಗಿತ್ತಾನಮ್ಮ ॥

.........................

ಚೆಲ್ವ ಹೆಂಡತಿಯ ಕುದುರೆಮಾಡಿ
ಒಳ್ಳೆಯ ರಾವುತನಾದಾನಮ್ಮ ।
ಒಳ್ಳೆಯ ರಾವುತನಾಗಿ ಮ್ಲೇಚ್ಛರ ।
ಡೊಳ್ಳಹೊಟ್ಟೆಯ ಮೇಲೆ
ಒದ್ದಾನಮ್ಮ ॥

ಇವರೇ ಇನ್ನೊಂದು ಪದ್ಯದಲ್ಲಿ ಒಂದೊಂದು ಅವತಾರ ವಿಷಯಗಳನ್ನು ಸ್ತೋತ್ರಪರವಾಗಿಯೂ ಚಿತ್ರಿಸಿದ್ದಾರೆ.

ನಿನ್ನ ನಾನೇನೆಂದೆನೋ ರಂಗಯ್ಯ ರಂಗ
ನಿನ್ನನಾನೇನೆಂದೆನೋ ।
ನಿನ್ನ ನಾನೇನೆಂದೆ ನಿಗಮ ಚೋರ
ಸ್ವಾಮಿ ।
ಪನ್ನಂಗ ಶಯನ ಪಾಲ್ಗಡಲೊಡೆಯನೆ
ರಂಗ ।

ಧೀರ ಸೋಮಕ ವೇದ ಖಳನ ಸೀಳಿ
ವಾರಿಧಿಗಿಳಿದು ಪರ್ವತವನೆತ್ತಿ ।
ಧಾರುಣಿಯನ್ನು ಕದ್ದ ದನುಜದಲ್ಲಣ
ನಾದ ನಾರಸಿಂಹ ನಮೋ ನಮೋ
ಎಂದೆನಲ್ಲದೇ ।
ನೀರಪೊಕ್ಕವನೆಂದನೆ ಬೆನ್ನಿನ ಮೇಲೆ
ಭಾರ ಪೊತ್ತವನೆಂದನೆ ।
ಬೇರ ಮೆದ್ದವನೆಂದೆನೆ ರಕ್ಕಸನೊಳು
ಹೋರಿ ಹೊಯ್ದನೆಂದು
ಪೊಗಳಿದೆನಲ್ಲದೆ ।.

... . . . . . . . . . . . . . .

ಚಿತ್ತಜಕೋಟಿ ಲಾವಣ್ಯ ತೇಜದಿ ಬಂದು
ಉತ್ತಮ ಸ್ತ್ರೀಯರ ವ್ರತವಳಿದು ।
ಮತ್ತೆ ಕಲ್ಕಿಯಾಗಿ ಮಧುರಸ ಮಡುಹಿದ
ಹತ್ತಾವತಾರದ ಹರಿಯೆಂದನಲ್ಲದೆ ।
ಬತ್ತಲಿದ್ದವನೆಂದನೆ—ತೇಜಿಯನೇರಿ
ಒತ್ತಿ ಆಳ್ದವನೆಂದನೆ ಬಾರಿಬಾರಿಗೂ ।
ಮತ್ತೆ ಪುಟ್ಟಿದನೆಂದನೆ ಆದಿಕೇಶವ—
ಭಕ್ತವತ್ಸಲನೆಂದು ಪೊಗಳಿದೆನಲ್ಲದೆ—

ಎಂಬುದಾಗಿ — ಸ್ವಾರಸ್ಯಮಯವಾಗಿ ಬಣ್ಣಿಸಿದ್ದಾರೆ.

ಜಗನ್ನಾಥದಾಸರು ಈ ದಶಾವತಾರ ಪಡೆದ ಪರಮಾತ್ಮನನ್ನು 'ರಕ್ಷಿಸು ಮಹಿಮನೆ' ಎಂಬುದಾಗಿ ಕೊಂಡಾಡಿದ್ದಾರೆ.

ರಮಾಮನೋಹರನೆ ಪತಿತಪಾವನಾ !
ಚೆಂದದಿಂದ ವೇದ ತಂದ
ಮಂದರೋದ್ಧರಾ ಅರ
ವಿಂದನಯನ ಬಂಧು ರಕ್ಷಿಸೋ
ಇಂದು ಭೂಧರಾ

ಕರುಳ ಮಾಲೆಯ ಧರಿಸಿದ ಶ್ರೀ
ವರದ ವಾಮನಾ–ಧೃತ
ಕರದ ಪರಶುರಾಮ ರಾಘವ
ಯದುಕುಲೋತ್ತಮಾ ।

ಲೋಕ ಮೋಹಕ ಬುದ್ಧನಾಗಿ
ತೇಜಿಯೇರಿದಾ–ಜಗ
ದೇಕ ಜಗನ್ನಾಥ ವಿಠಲ
ಭೀತರಾಂತರಾ__ ರಕ್ಷಿಸೋ ॥

ವಿಜಯದಾಸರು ತಮ್ಮ ಸುಳಾದಿ ಯೊಂದರಲ್ಲಿ;

ಮೀನನಾಗಿ ಕಮಠನಾಗಿ ಸೂಕರನಾಗಿ ।
ಮಾನವ ಮತ್ತು ಸಿಂಗನಾಗಿ ದಾನ
ಬೇಡುವನಾಗಿ ।
ಇವನೆ ಈವನಾಗಿ ಕಾನನವಾಸಿಯಾಗಿ ।
ಗೊಲ್ಲನಾಗಿ ದಿಗಂಬರನಾಗಿ ರಾವುತನಾಗಿ
ತಿರುಗಿ ತಿರುಗಿ__

ಎಂದಾಗಿ ವರ್ಣಿಸುತ್ತಾರೆ.

ವ್ಯಾಸರಾಯರು ಹತ್ತಾವತಾರದ ನಾರಾಯಣನೇ ಶರಣು ಶರಣು ಎಂದು ಹೇಳುತ್ತ;

ಶರಣು ಮತ್ಸ್ಯನೆ ಕೂರ್ಮಕ್ರೋಢನೆ
ನರಹರಿಯೆ ವಟು ಭಾರ್ಗವ ।
ಶರಣು ರಾಘವ ಕೃಷ್ಣ ಬುದ್ಧನೆ
ಶರಣು ಕಲ್ಕಿಯ ರೂಪನೇ ।

ನಂಬಿದೆನು ನಾನಿನ್ನ ಕೇಶವ ನಾರಾಯಣನೇ ಮಾಧವಾ ..... .. ಎಂದು ಭಾವ ಪರವಶರಾಗಿ ವರ್ಣನೆ ಮಾಡುತ್ತಾರೆ.

ಮಹಿಪತಿದಾಸರು ಕೋಲಿನ ಪದ್ಯದಲ್ಲಿ ಬಹುಸುಂದರವಾಗಿ ಹತ್ತವತಾರವನ್ನು ವರ್ಣಿಸಿದ್ದಾರೆ.

ಶಿಕ್ಷಿಸಿ ನಿಗಮಚೋರ ರಾಕ್ಷಸನ ಕೊಂದು
ರಕ್ಷಿಸಿ ವೇದವನುಳುಹಿದ ಕೋಲೆ ।
ರಕ್ಷಿಸಿ ವೇದವನುಳುಹಿದ ಕ್ಷಿತಿಯೊಳು
ಮತ್ಸ್ಯಾವತಾರನೇ ಬಲಗೊಂಬೆ ಕೋಲೆ

.... . . .. .. . ..

ಮಲ್ಲಮಾತ್ಸ್ಯರನೆಲ್ಲ ಹಲ್ಲುಮುರಿಯಲಾಗಿ ।
ನಲ್ಲತೇಜಿಯನೇರಿದಕೋಲೆ–
ನಲ್ಲಾತೇಜಿಯು ನೇರಿದ ಬಲ್ಯಾಕ್ಯನಾಗಿ ।
ಕಲ್ಯಾಕ್ಯವತಾರನಾ ಬಲಗೊಂಬೆ ಕೋಲೆ

ಗೋಪಾಲದಾಸರು ಒಂದು ಉಗಾಭೋಗದಲ್ಲಿ ಅತಿಚಮತ್ಕಾರವಾಗಿ ದಶಾವತಾರದ ನಿಂದಾಸ್ತುತಿಯನ್ನು ಮಾಡಿರುತ್ತಾರೆ.

ನೀರಿನಲಿ ನಿಂತು ನಿಡಗುಟ್ಟಿನಾರುವಗೆ ಗಂ
ಬನ ಕಸ್ತೂರಿ ಲೇಪನದ ಮದವೋ
ಭಾರ ಬೆನ್ನಲಿಪೊತ್ತು ಕಾಲುಕೈ
ಮುದುರಿದವಗೆ
ಧೀರಶೇಷ ಶಯನದ ಮದವೋ
ಮೋರೆಯಲಿ ನೆಲಕೆದರಿ ಬೇರುಗಳ
ಮೆಲುವವಗೆ
ಸಾರ ಷಡ್ರಸ ಭೋಜನದ ಮದವೋ ।
ಕಾರುಕರುಳನು ವನಮಾಲೆ ಹಾಕಿದಗೆ
ಹಾರ ಪದಕಾದಿಗಳ ಹಾರದ ಮದವೋ ।

... .......... . ............. .....

ಊರೆಲ್ಲ ಬತ್ತಲೆಯಾಗಿ ನಿಂತವಗೆ
ಚಾರುಪೀತಾಂಬರ ಉಡುವ ಮದವೊ ।
ಘೋರ ತುರಗವನೇರಿ ಹಾರಿಸ್ಯಾಡುವಗೆ ।
ವೀರಸಿಂಹಾಸನದಿ ಕುಳಿತಿರುವ
ಮದವೋ ।

ಪುರಂದರ ದಾಸರು ಮಾಡಿರುವ ಕೆಳಗಿನ ಸ್ತೋತ್ರದಲ್ಲಿಯ ಭಾವ ಅಂದವಾಗಿದೆ.

ಖಳನು ವೇದವನೆಯ್ಯೆ ಪೊಳೆವ
ಕಾಯನಾದ ದಾಸಯ್ಯ ಬಂದ ಕಾಣೆ ।
ಘಳಿಗೆಲಿ ಕೂರ್ಮ ತಾನಾಗಿ ಗಿರಿಯ
ಪೊತ್ತ ದಾಸಯ್ಯ ಬಂದ ಕಾಣೆ ।

....................... .......... .........

ಪುಂಡುತನದಿ ಪೋಗಿ ಪುರವನುರುಪಿ
ಬಂದ ದಾಸಯ್ಯ ಕಾಣೆ ।
ಲಂಡರ ಸದೆಯಲು ತುರಂಗವ ನೇರಿದ
ದಾಸಯ್ಯ ಬಂದ ಕಾಣೆ ।
ಹಿಂಡು ವೇದಗಳಲ್ಲಿ ಅರಸಿಯ ನೋಡಲು
ಸಿಗದ ದಾಸಯ್ಯ ಬಂದ ಕಾಣೆ ।
ಪಾಂಡುರಂಗ ನಮ್ಮ ಪುರಂದರ ವಿಠಲ
ದಾಸಯ್ಯ ಬಂದ ಕಾಣೆ ।

ಹೆಳವನಕಟ್ಟೆ ಗಿರಿಯಮ್ಮನವರು ಹೀಗೆ ಭಾವಪೂರ್ಣರಾಗಿ 'ದಶಾವತಾರ' ವನ್ನು ವರ್ಣಿಸಿದ್ದಾರೆ.

ಹೊನ್ನುತಾ ಗುಬ್ಬಿ ಹೊನ್ನುತಾ ।
ನಮ್ಮ
ಚಿನುಮಯ ಮೂರುತಿ ಚೆಲುವ ರಂಗನ
ಕೈಗೆ ।
ಆಗಮವನು ತಂದು ಜಗಕಿತ್ತ ಕೈಗೆ ।
ಸಾಗರವ ಮಥಿಸಿ ಸುಧೆ ಕುಡಿದ ಕೈಗೆ ।

. .... ......... .. .. . ......... ..

ಪತಿವ್ರತೆಯರ ವ್ರತವನಳಿದಂಥ ಕೈಗೆ ।
ಹಿತವಾಜಿಯನೇರಿ ಮರ್ದಿಸಿ
ದಂಥಕೈಗೆ
ಹೊನ್ನುತಾ ಗುಬ್ಬಿಹೊನ್ನುತಾ–

ಕದರುಮಂಡಲಗಿದಾಸರು ಪರಮಾತ್ಮನನ್ನು ದಶಾವತಾರ ವರ್ಣನೆಯಿಂದ ಬರಮಾಡಿಕೊಳ್ಳುವದು ಅಂದವಾಗಿದೆ

ಬಾರೋ ರಂಗ ಬಾರೋ ।
ಬಾರೋ ಕೃಷ್ಣ ಮನೆಗೆ ।
ಕಣ್ಣಬಿಡುವುತ ಕಠಿಣ ।
ಬೆನ್ನಿಲೆ ಗಿರಿಯಾನೆತ್ತಿ ।
ಮಣ್ಣಕೆದರುತ ಸಣ್ಣ ।
ಚಿನ್ನ ಪ್ರಲ್ಹಾದಗೊಲಿದ ।
ಬಲಿಯದಾನವ ಬೇಡಿ ।
ನೆಲವ ಮೂರಡಿ ಮಾಡಿ ।
ಛಲದಿ ಸತಿಯಳ ಕೂಡಿ ।
ಗೊಲ್ಲರೊಳಗೋಡಾಡಿ ।
ಬತ್ತಲೆ ತೇಜಿಯನೇರಿ ।
ಹತ್ತಿತಿರುವುತನಾಗಿ ।
ಉತ್ತಮ ಕದರುಂಡಲಗೀಶ
ಪೊರೆ ಕೃಷ್ಣ ಪಾಂಡುರಂಗ ।

ಹೀಗೆ ವಿವಿಧ ಭಾವ ಭಂಗಿಗಳಲ್ಲಿ ಆ ಪರಮಾತ್ಮನನ್ನು ಹೊಗಳಿ ಹಾಡಿದ ಸಾಹಿತ್ಯವೇ ಅಪ್ರತಿಮವಾದ ದಾಸಸಾಹಿತ್ಯವೆಂದು ಧಾರಾಳವಾಗಿ ಹೇಳಬಹುದು.

★ ★

# ವೆಂಕಟೇಶ್ವರಸ್ವಾಮಿಯವರ ದೇವಸ್ಥಾನ, ತಿರುಮಲೆ.
# ವಿವಿಧ ಆರ್ಜಿತ ಉತ್ಸವಗಳ ಪರಿಷ್ಕೃತ ದರಗಳ ವಿವರಣೆ

## 1. ದರ್ಶನಗಳು

| | | | |
|---|---|---|---|
| 1 | ವಿಶೇಷ ಪ್ರವೇಶ | ರೂ | 25 |

## 2. ಸೇವೆಗಳು

| | | | |
|---|---|---|---|
| 1 | ಆಮಂತ್ರಣೋತ್ಸವ | ರೂ. | 200 |
| 2 | ಅಭಿಷೇಕ (ಪುಲಿಕಾಪುಸೇವ) | ರೂ. | 500 |
| 3. | ಗಂಬುರಗಿನ್ನೆ | ರೂ. | 300 |
| 4 | ಪುನುಗುಗಿನ್ನೆ | ರೂ. | 200 |
| 5 | ಜಾಫ್ರಾಗಿನ್ನೆ | ರೂ. | 100 |
| 6. | ಕಸ್ತೂರಿಗಿನ್ನೆ | ರೂ. | 100 |
| 7. | ಸಹಸ್ರಕಲಶಾಭಿಷೇಕ | ರೂ. | 2500 |
| 8. | ತಿರುಪ್ಪಾವಡ | ರೂ. | 5000 |
| 9. | ಕೋಯಿಲ್ ಆಳ್ವಾರು ತಿರುಮಂಜನ | ರೂ. | 1745 |
| 10. | ಐನಾ ಮಹಲಿನಲ್ಲಿನ ಡೋಲೋತ್ಸವ | ರೂ. | 1000 |

## 3. ಉತ್ಸವಗಳು

| | | | |
|---|---|---|---|
| 1. | ವಸಂತೋತ್ಸವ | ರೂ. | 2500 |
| 2 | ಕಲ್ಯಾಣೋತ್ಸವ | ರೂ. | 1500 |
| 3 | ಬ್ರಹ್ಮೋತ್ಸವ | ರೂ. | 750 |

## 4. ವಾಹನಗಳು

1. ಸರ್ವಭೂಪಾಲವಾಹನ–ವಜ್ರಕವಚಸೇವೆ ಬಂಗಾರದ ಗರುಡ, ಕಲ್ಪವೃಕ್ಷ, ದೊಡ್ಡ ಶೇಷ ಸರ್ವಭೂಪಾಲ ಸೂರ್ಯಪ್ರಭೆ–ಒಂದೊಂದು ವಾಹನ ರೂ. 125
2. ಬೆಳ್ಳಿಯಗರುಡ, ಚಿಕ್ಕಶೇಷ, ಚಂದ್ರಪ್ರಭೆ, ಆನೆ, ಕುದುರೆ, ಹಂಸ, ಹನುಮಂತ ಒಂದೊಂದು ವಾಹನ ಸೇವೆ ರೂ. 100

ಮೂವರಿಗೆ ಮಾತ್ರ ಪ್ರವೇಶ.

## 5. ಅನ್ನಪ್ರಸಾದಗಳು (ಕಾಲಸೋಲ)

| | | | |
|---|---|---|---|
| 1. | ದಧ್ಯೋದನ | ರೂ. | 75 |
| 2. | ಪುಲಿಯೋಗರೆ (ಚಿತ್ರಾನ್ನ) | ರೂ. | 75 |
| 3. | ಪೊಂಗಲ್ | ರೂ. | 100 |
| 4 | ಸಕ್ಕರೆ ಪೊಂಗಲ್ | ರೂ. | 100 |
| 5 | ಸಾಕರಬಾತ್ | ರೂ. | 125 |
| 6. | ಕೇಸರಿಬಾತ್ | ರೂ. | 125 |
| 7 | ಪಾಯಸ | ರೂ. | 125 |
| 8. | ಸೀರಾ | ರೂ | 200 |

## 6 ಪಡಿ ಪ್ರಸಾದಗಳು

| | | | |
|---|---|---|---|
| 1 | ಅಪ್ಪವು | ರೂ. | 250 |
| 2 | ಲಾಡು | ರೂ. | 600 |
| 3. | ವಡೆ | ರೂ. | 350 |
| 4. | ಹೋಳಿ | ರೂ. | 250 |
| 5. | ದೋಸೆ | ರೂ. | 250 |
| 6 | ತೇನೆತೊಳ | ರೂ. | 250 |
| 7. | ಸುಖಿಯವು | ರೂ. | 250 |
| 8. | ಜಿಲೇಬಿ | ರೂ. | 600 |

## 7. ನಿತ್ಯ ಸೇವೆಗಳು

| | | | |
|---|---|---|---|
| 1. | ಕರ್ಪೂರ ಆರತಿ | ರೂ. | 150 |
| 2. | ನವನೀತ ಆರತಿ | ರೂ. | 400 |
| 3. | ಅರ್ಚನೆ | ರೂ. | 200 |
| 1) | ಶಾಶ್ವತ ನಿತ್ಯ ಕರ್ಪೂರ ಆರತಿ | ರೂ. | 3000 |
| 2) | ಶಾಶ್ವತ ನಿತ್ಯ ನವನೀತ ಆರತಿ | ರೂ. | 8000 |
| 3) | ಶಾಶ್ವತ ನಿತ್ಯ ಅರ್ಚನೆ | ರೂ. | 4000 |

ಷರಾ :— (1) ಸಹಸ್ರ ಕಲಶಾಭಿಷೇಕ ಪ್ರತಿ ಬುಧವಾರ, ತಿರುಪ್ಪಾವಡ ಪ್ರತಿ ಗುರುವಾರ ಜರುಗುವುವು.

(2) ಆಮಂತ್ರಣೋತ್ಸವಕ್ಕೆ ಐವರಿಗೆ ಬದಲಾಗಿ ಇಬ್ಬರೇ ಅನುಮತಿಸಲ್ಪಡುವರು.

(3) ಕಲ್ಯಾಣೋತ್ಸವ, ಆರ್ಜಿತ ಬ್ರಹ್ಮೋತ್ಸವ, ಊಂಜಲ್ ಸೇವೆ, ಮಂಗಳವಾರದಲ್ಲಿ ಪುಷ್ಪೋತ್ಸವ ಮಧ್ಯಾಹ್ನ 1 ಗಂಟೆ ರಾತ್ರಿ 8 ಗಂಟೆ ನಡುವೆ ಜರುಗುವುವು.

(4) ವಿಶೇಷ ಪ್ರವೇಶದ ಟಿಕೆಟ್ಟಿನವರು ಹಿಂದಿನಂತೆ ಧ್ವಜಸ್ತಂಭದ ಹತ್ತಿರವಲ್ಲದೆ ಮಹಾದ್ವಾರದ ಹತ್ತಿರ ಸರತಿಯ ಸಾಲಿನಲ್ಲಿ ಸೇರಿಸಲ್ಪಡುವರು.

ಕಾರ್ಯನಿರ್ವಹಣಾಧಿಕಾರಿ,
ತಿರುಮಲ ತಿರುಪತಿ ದೇವಸ್ಥಾನ
ತಿರುಪತಿ–517 501

# ಜನಪದ ಸಾಹಿತ್ಯದಲ್ಲಿ ಪರಮಾರ್ಥ ಗೀತೆಗಳು

ಡಾ॥ ಆರ್. ವಿ. ಎಸ್. ಸುಂದರಂ

ಬೆಳಗಾಗಿ ನಾನೆದ್ದು ಯಾರ್ಯಾರ ನೆನೆಯಾಲಿ
ಎಳ್ಳು ಜೀರಿಗೆ ಬೆಳೆಯೊಳಿಯೋಳ ಭೂತಾಯ
ಎದ್ದೊಂದು ಗಳಿಗೆ ನೆನೆದೇನು ॥
ದೇವರ ನೆನೆದಾರೆ ಸಾವುಟ್ಟು ನಮಗಿಲ್ಲ
ಹಾವು ಕಚ್ಚಿದರೂ ವಿಷವಿಲ್ಲ ಸರ್ಪಾನ
ಹೆಡೆಯ ದಾಟಿದರೂ ಭಯವಿಲ್ಲ ॥

ಭೂತಾಯಿಯ ಸಹಾಯವನ್ನು ಮರೆಯದೆ, ಒಂದು ಗಳಿಗೆ ಆಕೆಯನ್ನು ನೆನೆಯುವ ಸುಸಂಸ್ಕೃತ ಚಿತ್ತವೃತ್ತಿ ನಾವು ಅಸಂಸ್ಕೃತರೆಂದು ಕೊಳ್ಳುವ ಜನಪದರಿಗಿದೆಯೆಂಬುದನ್ನು ಮೊದಲನೆಯ ಪದ್ಯ ತಿಳಿಸುತ್ತದೆ. ದೇವರನ್ನು ನೆನೆದರೆ ಸಾವು, ಹುಟ್ಟು ನಮಗಿಲ್ಲವೆಂದೂ, ಹಾವು ಕಚ್ಚಿದರೂ ವಿಷವಿಲ್ಲವೆಂದೂ ಅಚಲವಾಗಿ ನಂಬಿದವರು ಜನಪದರು ಇವರು ದೇವರನ್ನು ಸ್ತುತಿಸುತ್ತಾರೆ, ಪೂಜಿಸುತ್ತಾರೆ, ವೇದಾಂತವನ್ನು ಮಾತಿನಲ್ಲಿ–ಹಾಡಿನಲ್ಲಿ ಹೇಳುತ್ತಾರೆ. ಪರಮಾರ್ಥ–ಪ್ರಾಪ್ತಿಗೆ ಸಾತ್ವಿಕರು ಹೇಳುವ ಮೂರು ಮುಖ್ಯ ಮಾರ್ಗಗಳು ಭಕ್ತಿ–ಕರ್ಮ–ಜ್ಞಾನ–ವೆಂಬುವು ಈ ಮಾರ್ಗಗಳಿಂದ ಮುಕ್ತಿ ಲಭಿಸುತ್ತದೆಂದು ಪುಸ್ತಕಗಳನ್ನು ಓದಿ ತಿಳಿದವರಲ್ಲ ಜನಪದರು. ಅತಿಮಾನುಷ ಶಕ್ತಿಗಳನ್ನು ಒಲಿಸಿಕೊಳ್ಳಬೇಕಾದರೆ, ಸ್ತುತಿ ಮಾಡುವುದು, ಆಚರಣೆಗಳನ್ನು ನಡೆಸುವುದು, ತತ್ವಚಿಂತನೆ ಮಾಡುವುದು ಎಂಬ ಮೂರು ಮಾರ್ಗಗಳನ್ನು ಅನುಸರಿಸಬೇಕೆಂದು ಅತ್ಯಂತ ಪ್ರಾಚೀನ ಕಾಲದಿಂದಲೇ ಮನುಷ್ಯರು ನಂಬಿದ್ದರು

ಪರಮಾರ್ಥವೆಂದರೆ–ಎಲ್ಲಕ್ಕಿಂತ ಮಿಗಿಲಾದ ಅತ್ಯಂತ ಉತ್ಕೃಷ್ಟವಾದ ಅರ್ಥ. ಪರಮಾರ್ಥವನ್ನು ಪಡೆಯಬೇಕಾದರೆ ಭಗವಂತನನ್ನು ಸ್ತುತಿಸಬೇಕು. ಇದು ಭಕ್ತಿ ಮಾರ್ಗವೆನಿಸಿ ಕೊಂಡಿದೆ. ಭಕ್ತಿಯಿಂದ ಪರಮೇಶ್ವರನ ಸಾಕ್ಷಾತ್ಕಾರವಾಗುತ್ತದೆಂದು ನಂಬಿಕೆ. ಇದಕ್ಕೆ ಪೂರ್ವ ಸಂಚಿತವಾದ ಪಾಪ ಪುಣ್ಯಾದಿ ಜ್ಞಾನ ವಿರೋಧಿಯಾದ ಕರ್ಮ ನಿರಸ್ತವಾಗಬೇಕು. ಇದು ನಿಷ್ಕಾಮಕರ್ಮದಿಂದ ಸಾಧ್ಯ. ಹೀಗೆ ಪಾಪಕ್ಷಯವಾದ ಮೇಲೆ ಬ್ರಹ್ಮಮೀಮಾಂಸೆಯನ್ನು ಅಭ್ಯಸಿಸಿ, ಬ್ರಹ್ಮಸ್ವರೂಪವನ್ನು ತಿಳಿದು ಮೋಕ್ಷವನ್ನು ಪಡೆಯಬೇಕೆಂದು ತಾತ್ವಿಕರು ಹೇಳುತ್ತಾರೆ.

ಮೇಲೆ ಹೇಳಿದ ಮೂರು ಮಾರ್ಗಗಳಲ್ಲಿ ಒಂದೊಂದು ಧರ್ಮದವರು ಒಂದೊಂದು ಮಾರ್ಗಕ್ಕೆ ಪ್ರಾಧಾನ್ಯವನ್ನು ಕೊಟ್ಟರು ಕೆಲವರು ಭಕ್ತಿ–ಕರ್ಮ–ಜ್ಞಾನ ಮಾರ್ಗಗಳಿಗೆ ಸಂಬಂಧವೇ ಇಲ್ಲವೆಂದರು ಮತ್ತೆ ಕೆಲವರು ಇವೆಲ್ಲಾ ಪರಸ್ಪರ ಸಂಬಂಧವಿರುವ ಮಾರ್ಗಗಳೇ ಎಂದು ಸಾರಿದರು. ಜನಪದರಿಗೂ ಈ ವಾದೋಪವಾದಗಳಿಗೂ ಸಂಬಂಧವಿಲ್ಲ. ಅವರಿಗೆ ಸ್ತುತಿ ಪದಗಳೂ ಬೇಕು, ಪೂಜೆ–ವ್ರತ–ಆಚರಣೆಗಳ ಕರ್ಮಮಾರ್ಗವೂ ಬೇಕು, ತತ್ವಚಿಂತನೆಯೂ ಬೇಕು

## ಭಕ್ತಿಗೀತೆಗಳು :

‘ಭಕ್ತಿಯಿಂದ ಮುಕ್ತಿ ಯುಕ್ತಿಯಿಂದ ಉಕ್ತಿ’ ಎಂಬ ಗಾದೆಯಿದೆ. ‘ಸಾಪರಾನುರಕ್ತಿರೀಶ್ವರೇ’ (ಶಾಂಡಿಲ್ಯ ಸೂತ್ರ,2) ಎಂಬ ಮಾತಿನಂತೆ ಈಶ್ವರನಲ್ಲಿ ಅನುರಕ್ತನಾಗಿರುವುದೇ ಭಕ್ತಿಗೆ ಮೂಲ ಸೋಪಾನ. ಎಲ್ಲ ಮಾರ್ಗಗಳಲ್ಲೂ ಪರಮಾರ್ಥ ಪ್ರಾಪ್ತಿಗೆ ಭಕ್ತಿ ಮಾರ್ಗವೇ ಸುಲಭವಾದುದೆಂದು ಹೇಳುತ್ತಾರೆ. ಭಕ್ತಿಯನ್ನು ಪಡೆಯುವ ಅಧಿಕಾರ ಎಲ್ಲರಿಗೂ ಇದೆ. ವರ್ಣಾಶ್ರಮ ವ್ಯತ್ಯಾಸಗಳಿಲ್ಲದೆ ಎಲ್ಲ ಜನರೂ ಭಕ್ತಿಮಾರ್ಗವನ್ನು ಅನುಸರಿಸಬಹುದು.

ಕನ್ನಡ ಜನಪದ ಗೀತೆಗಳಲ್ಲಿ ಭಕ್ತಿ ಗೀತೆಗಳು ಅಥವಾ ಸ್ತುತಿ ಪದಗಳಿಗೆ ಗಣನೀಯ ಸ್ಥಾನವಿದೆ. ನಾಟಿಹಾಕುವಾಗ, ಕಳೆಕೀಳುವಾಗ, ಹಂತಿ ಕಟ್ಟುವಾಗ ಹಾಡುವ ಬೇಸಾಯದ ಪದಗಳಲ್ಲೂ ಅನೇಕ ಸ್ತುತಿ ಪದಗಳಿವೆ. ಕೋಲಾಟಗಳಲ್ಲಿ, ಮದುವೆಯ ಹಾಡುಗಳಲ್ಲಿ, ಬೀಸುವಕಲ್ಲಿನ ಪದಗಳಲ್ಲಿ, ಒನಕೆಯ ಹಾಡುಗಳಲ್ಲಿ, ವೈನೋದಿಕ ಗೀತೆಗಳಲ್ಲಿ, ಹಬ್ಬದ ಹಾಡುಗಳಲ್ಲಿ ಸ್ತುತಿಗಳಿವೆ. ಹೀಗೆ ಜೀವನದ ನಾನಾ ಸಂದರ್ಭಗಳಲ್ಲಿ ಬಳಸುವ ವಿವಿಧ ಜನಪದ ಗೀತೆಗಳಲ್ಲಿ ಭಕ್ತಿ ನಿಸರ್ಗ ಪ್ರವಂತಿಯಂತೆ ಹರಿಯುತ್ತಿದೆ.

ಜನಪದರ ಸ್ತುತಿಗೆ ಪಾತ್ರರಾಗಿರುವ ದೇವರಲ್ಲಿ ಶಿವ, ಅವನಿಗೆ ಸಂಬಂಧಿಸಿದ ಬೇರೆ ದೇವ ದೇವತೆಗಳೂ ಸೇರಿದ್ದಾರೆ. ಶಿವಸಂಬಂಧ ದೇವತೆಗಳಲ್ಲಿ ಗಣನಾಯಕನಿಗೆ ಅಗ್ರಸ್ಥಾನ. ಕೋಲಾಟಗಳಲ್ಲಿ ಮೊದಲಸ್ತುತಿ ಗಣನಾಥನಿಗೇ ಸಲ್ಲುತ್ತದೆ.

“ಶರಣು ಶರಣುಮಯ್ಯ ಗಣನಾಯ್ಕ
ನಮ್ಮ ಕರುಣದಿಂದಲಿ ಕಾಯೊ ಗಣನಾಯ್ಕ
ಎಳ್ಳುಂಡೆ ಜೇನು ತುಪ್ಪ ಗಣನಾಯ್ಕ
ನಮಗೆ ವಿದ್ಯಾವ ಕಲಿಸಯ್ಯ ಗಣನಾಯ್ಕ
ಉದ್ದು ಹೋಳಿಗೆ ತುಪ್ಪ ಗಣನಾಯ್ಕ
ಗೊನೆ ಮೇಗ್ಲ ಬಾಳೆ ಹಣ್ಣು ಗಣನಾಯ್ಕ .”

ಮೇಲಿನ ಕೋಲಾಟದ ಪದ ಕನ್ನಡನಾಡಿನಲ್ಲಿ ತುಂಬ ಜನಪ್ರಿಯವಾಗಿದೆ

ಕನ್ನಡದಲ್ಲಿ ಶಿವ ಸಂಬಂಧ ಗೀತೆಗಳು ಅಸಂಖ್ಯಾತವಾಗಿ ಕಂಡುಬರುತ್ತವೆ. ಬಸವೇಶ್ವರನ ವೀರಶೈವದ ಪ್ರಭಾವದಿಂದ ಜನಪದ ಗೀತೆಗಳಲ್ಲೂ ಶೈವಸುತ್ತಿಗಳಿಗೆ ಹೆಚ್ಚು ಪ್ರಾಧಾನ್ಯತೆ ಸಿಕ್ಕಿದೆ. ಸಂಗಮೇಶ್ವರ, ಸೋಮೇಶ್ವರ, ಮಹಾಕೂಟೇಶ್ವರ, ಮಹಾಬಲೇಶ್ವರ, ಮಲ್ಲಿಕಾರ್ಜುನ, ವೀರಭದ್ರ, ವಿರೂಪಾಕ್ಷ, ಬಸವೇಶ್ವರ, ಚೆನ್ನಬಸವೇಶ್ವರ, ರೇವಣಸಿದ್ಧೇಶ್ವರ, ಸಿದ್ಧರಾಮೇಶ್ವರ, ನೀಲಮ್ಮ ಗೊಲ್ಲಾಳ ಮುಂತಾದ ಅನೇಕ ಶಿವ ಶರಣರು, ಸಾಧುಸತ್ಪುರುಷರು ಕನ್ನಡ ಭಕ್ತಿ ಗೀತೆಗಳಲ್ಲಿ ಸ್ಥಾನ ಪಡೆದಿದ್ದಾರೆ.

ಏನಾದರೂ ಜೀವನದಲ್ಲಿ ಸಂಕಟಕ್ಕೆ ಒಳಗಾದಾಗ ‘ಎಲೆ ಮನವೆ ಶಿವನೆಂಬ ಶಬುದ ಬೀಡಬೇಡ’ ಜನಪದರು ಶಿವನನ್ನು ನೆನೆಯುವರು ಜನಪದರ ದೃಷ್ಟಿಯಲ್ಲಿ ಅಗತ್ಯಬಿದ್ದಾಗ ಆಸರೆಯಾಗಿ ನಿಲ್ಲುವವನು ಪರಮಾತ್ಮನೊಬ್ಬನೇ.

“ಮಂದಿ ಮಂದೀಯೆಂದು ಮಂದಿ ನಂಬಲಿ ಹೋದ
ಮಂದಿ ಬಿಟ್ಟಾರ ನಡುನೀರ ! ಮಲ್ಲಯ್ಯ
ತಂದಿ ನನಕೈಯ ಬಿಡಬ್ಯಾಡ”

ಎನ್ನುತ್ತಾರೆ ಜನಪದರು

ಕೆಲವು ಕನ್ನಡ ತ್ರಿಪದಿಗಳಲ್ಲಿ ಅತ್ಯಂತ ಸುಂದರವಾದ ವರ್ಣನೆಗಳಿವೆ. ಚಿಕ್ಕ ಪದ್ಯದಲ್ಲಿ ಚೊಕ್ಕವಾದ ಭಾವವನ್ನು ಅಡಗಿಸುವ ಜನಪದರ ಜಾಣ್ಮೆ ಒಂದೊಂದು ಸಾರಿ ಬೆರಗು ಗೊಳಿಸುತ್ತದೆ. ದೇವರನ್ನು ನೋಡಿ, ಸ್ತುತಿಸಿ, ತನ್ನ ಸಂಕಟವನ್ನು ತೋಡಿ ಕೊಳ್ಳಬೇಕೆಂದು ಒಬ್ಬ ಭಕ್ತನು ಬಂದ. ಆದರೆ ದೈವದರ್ಶನವಾಗಲಿಲ್ಲ. ದುಃಖತಪ್ತನಾದ

ಆ ಭಕ್ತನಿಗೆ ಒಂದು ಮರ ಕಾಣಿಸಿತು. ಮರದ ತುಂಬ ಹೂವುಗಳಿದ್ದವು ಆಗ ಅವನು ಹೀಗೆಂದು ಹಾಡಿದ

"ಹೂವಿನಾಗ ಹುದುಗ್ಯಾನ ಮಾಲ್ಯಾಗ ಮಲಗ್ಯಾನ
ಮೊಗ್ಗಾಗ ಕಣ್ಣು ತೆರೆದಾನ ಲಿಂಗಯನ
ನೋಡಟಿಕೆ ಸಿದ್ದಿ ಬಯಲಾಗಿ"

ಹೂವಿನಲ್ಲಿ ಹುದುಗಿ, ಹೂಮಾಲೆಯಲ್ಲಿ ಶಯನಿಸಿ, ಮೊಗ್ಗಿನ ರೂಪದಲ್ಲಿ ಕಣ್ಣು ತೆರೆದ ಶಿವನ ಅದ್ಭುತ ಚಿತ್ರವಿದು.

ಶಿವನ ದಯವೊಂದಿದ್ದರೆ ಎಂಥ ಕಷ್ಟವನ್ನಾದರೂ ಹೊರಬಹುದೆಂಬ ಮನೋಭಾವ ಜನಪದರದು

"ಬಡತನ ನನಗಿರಲಿ ಭಾಳ ಮಕ್ಕಳಿರಲಿ
ಮ್ಯಾಗ ಗುರುವಿನ ದಯವಿರಲಿ ನನಗುರುವೆ
ಬಡತನದ ಚಿಂತಿ ನಿನಗಿರಲಿ"

"ನನ್ನನ್ನು ಎಷ್ಟು ಕಷ್ಟಗಳಾದರೂ ಮುತ್ತಿಗೆ ಹಾಕಲಿ ಅವುಗಳನ್ನು ಸಹಿಸುವ ಶಕ್ತಿಯನ್ನು ಮಾತ್ರ ನನಗೆ ದಯಪಾಲಿಸು" ಎಂದು ಹೇಳುವ ...ೀಂದ್ರರ ಗೀತೆಯನ್ನು ಹೋಲುತ್ತದೆ ಮೇಲಿನ ...ನಪದಗೀತೆ.

ಕನ್ನಡ ನಾಡಿಯಲ್ಲಿ ಚುಂಚನಗಿರಿಯೆಂಬ ಕ್ಷೇತ್ರಕ್ಕೆ ಅಸಂಖ್ಯಾತ ಭಕ್ತರು ಆಗಮಿಸುವರು. ಆಗ ಎಲ್ಲರೂ ಬೆಟ್ಟದ ಮೇಲೆ ಅಲ್ಲಲ್ಲಿ ಕುಳಿತು ಗೀತೆಗಳನ್ನು ಹಾಡುತ್ತಾರೆ. ಇಂಥ ಜನಪದ ಗೀತೆಗಳು ಸಾವಿರಾರು ಸಂಖ್ಯೆಗಳಲ್ಲಿವೆ. ಶ್ರೀಶೈಲದ ಮಲ್ಲಿಕಾರ್ಜುನನು ಕನ್ನಡಿಗರಿಗೆ ಪ್ರೀತಿ ಪಾತ್ರನಾದ ಮತ್ತೊಬ್ಬ ದೇವರು. ಶಿವರಾತ್ರಿ ಸಂದರ್ಭದಲ್ಲಿ ಕಾವಡಿಯನ್ನು ಹೊತ್ತುಕೊಂಡು ಭಕ್ತರು ಶ್ರೀಶೈಲಕ್ಕೆ ಹೊರಡುತ್ತಾರೆ ಇಂತಹ ಸಂದರ್ಭದಲ್ಲಿ ಹಾಡುವ ಹಾಡುಗಳನ್ನು 'ಕಂಬಿಯ ಹಾಡುಗಳು' ಎಂಬ ಹೆಸರಿನಲ್ಲಿ ಸಂಗ್ರಹಮಾಡಿ ಡಾ॥ ಬಿ. ಎಸ್ ಗದ್ದಗಿಮಠ ಅವರು ಪ್ರಕಟಿಸಿದ್ದಾರೆ

ಬಸವೇಶ್ವರನಿಗೂ ಕನ್ನಡ ಸ್ತುತಿಪದಗಳಲ್ಲಿ ಸಾಕಷ್ಟು ಪ್ರಾಧಾನ್ಯವಿದೆ. ಬಸವಣ್ಣನನ್ನು ಅವತಾರ ಪುರುಷನೆಂದೇ ಭಾವಿಸಿ ಜನಪದರು ಗೀತೆಗಳಲ್ಲಿ ಸ್ತುತಿಸಿದ್ದಾರೆ. ಬೇಸಾಯಗಾರರಿಗಂತು ಬಸವೇಶ್ವರ ಅನ್ನಪ್ರದಾತ. ಅವರ ಸಂಪತ್ತಿಗೆ ಕಾರಣನಾದುದಕ್ಕೆ ಕೃಷಿಕರು ಬಸವನಿಗೆ ಕೃತಜ್ಞರಾಗಿರುತ್ತಾರೆ ಬಸವನನ್ನು ಎತ್ತು ಎನ್ನಬಾರದೆಂದು ಹಾಡುತ್ತಾರವರು

"ಎತ್ತು ಎನಬಹುದೆ ಎಡ ಚೋರಿ ಬಸವನ
ಸುತ್ತೆಂಟು ಲೋಕ ಸಲಹಾನ ಬಸವನ
ಸತ್ಯ ಮರೆಯುವುದೆ ಧರೆಯಲ್ಲಿ"



ಆನಂದನಿಲಯವೂ ಚಿನ್ನವೇ — ತಿರುಪತಿ ತಿಮ್ಮಪ್ಪನ ಬಗೆಗಿನ ಹಾಡಿನ ಹಿನ್ನೆಲೆಯಲ್ಲಿ

ಕನ್ನಡ ಜನಪದ ಗೀತೆಗಳಲ್ಲಿರುವ ಇನ್ನೊಂದು ವೈಶಿಷ್ಟ್ಯವೆಂದರೆ, ಅವುಗಳಲ್ಲಿ ಶಿವಶರಣರನ್ನು ಕುರಿತ ಗೀತೆಗಳೂ ಅಧಿಕ ಸಂಖ್ಯೆಯಲ್ಲಿರುವುದು. 'ಮುಗ್ಧ ಶರಣರ ಹಾಡು ಸಿದ್ಧಿ ಮಂತ್ರವು ನೋಡು' ಎಂಬುದು ಜನಪದರ ಅಭಿಪ್ರಾಯವಾಗಿದೆ

ವಿಷ್ಣುವಿಗೆ ಸಂಬಂಧಿಸಿದ ಗೀತೆಗಳೂ ಕನ್ನಡದಲ್ಲಿ ಹಲವಾರಿವೆ. ತಿರುಪತಿ ವೆಂಕಟೇಶ್ವರನು ಕನ್ನಡಿಗರಿಗೂ ಪ್ರೀತಿಪಾತ್ರನಾದ ದೇವರು ತಿರುಪತಿ ತಿಮ್ಮಪ್ಪನನ್ನು ಕುರಿತ ಗೀತೆಗಳು ಕನ್ನಡದಲ್ಲಿ ಅನೇಕ ಸಿಕ್ಕುತ್ತವೆ. ವೆಂಕಟರಮಣನು ಶ್ರೀಮಂತ. ಅವನ ವೈಭವವವೇ ವೈಭವ ಅವನ ಅಡುಗೆ ಮನೆ ಚಿನ್ನ, ಬೆಟ್ಟಚಿನ್ನ, ಸ್ನಾನಮಾಡುವ ಕೊಳ ಚಿನ್ನ. ಈ ಶ್ರೀಮಂತಿಕೆಯನ್ನು ಜನಪದರು ಹೀಗೆ ವರ್ಣಿಸಿದ್ದಾರೆ

"ಅಡಿಗೆಮನೆ ಚಿನ್ನ ಕಡಿಯೊ ಕಂಬ ಚಿನ್ನ
ಕೋನೇರಿ ಚಿನ್ನ ಗಿರಿಚಿನ್ನ—ವೆಂಕಟ ದೊರೆ
ಸ್ನಾನ ಮಾಡುವ ಕೊಳ ಚಿನ್ನ"

ತಿರುಪತಿ ತಿಮ್ಮಪ್ಪನನ್ನು ಕುರಿತ ಇಂತಹ ಹಾಡುಗಳು ಕೆಲವನ್ನು 'ಅವರ ನೆನೆದೇವು' ಎಂಬ ಸಂಪುಟದಲ್ಲಿ ಡಾ॥ ಜೀ. ಶಂ. ಪರಮಶಿವಯ್ಯ ಪ್ರಕಟಿಸಿದರು. ಕ. ರಾ. ಕೃಷ್ಣಸ್ವಾಮಿ ಇಂಥ ಅನೇಕ ಗೀತೆಗಳನ್ನು ಸಂಗ್ರಹಿಸಿ 'ಗಿರಿಕಾಣೆ ಮೂಡಲಗಿರಿ' ಎಂಬ ಸಂಪುಟವನ್ನು ಹೊರತಂದಿದ್ದಾರೆ.

"ವೆಂಕಟರಮಣಾನೆ ಒಳೆಯ ಗೋವಿಂದಾನೆ
ಭಕುತರಿಗೊಲಿಯೊ ಸುಗುಣಾನೆ ತಿಮ್ಮಯ್ಯ
ಸೋಲಿಸ ಬೇಡ ಗೆಲಿಸಯ್ಯ"

ಎಂದು ವೆಂಕಟರಮಣನನ್ನು ಭಕ್ತರು ಸ್ತುತಿಸುತ್ತಾರೆ.

ಪಂಡರಿಪುರದ ಪಾಂಡುರಂಗನೂ ಕನ್ನಡಿಗರ ಇಷ್ಟ ದೈವಗಳಲ್ಲೊಬ್ಬನು. ಕೆಲವು ಗೀತೆಗಳಲ್ಲಿ ವಿಠಲನ ಮೋಹನ ರೂಪವನ್ನು ಕವಿಗಳು ಕೀರ್ತಿಸಿದ್ದಾರೆ

"ಇಟ್ಟಿಗೆ ಕಲ್ಲಮ್ಯಾಲ ಊರಿನಿಂತಾನೆರಡು ಪಾದ
ಜರದ ಮುಂದೀಲ ಶಾಲ ಇಳಿಯ ಬಿಟ್ಟಾರ ಚೋಲ
ನಾದಬ್ರಹ್ಮ ಮೇಘಶಾಮ ಸೃಷ್ಟಿಕರ್ತ ಸರ್ವಗೋಮ
ಸಾಧುಸಂತರ ಪ್ರೇಮ
ಹ್ಯಾಂಗ ನಿಂತಾರೆ ನಗವೇಳಿರೇ ಶ್ರೀಪಾಂಡುರಂಗ

(28 ನೇ ಪುಟ ನೋಡಿ)

# ಶಿವರಾತ್ರಿ ಎಲ್ಲಿ; ಹೇಗೆ ?



ಭಾರತವನ್ನು ಹಬ್ಬಗಳ ದೇಶವೆಂದರೆ ಆಶ್ಚರ್ಯ ವೆನಿಸಲಾರದು. ಭಾರತದಲ್ಲಿ ಕಂಡು ಬರುವಷ್ಟು ವೈವಿಧ್ಯಮಯ ಹಬ್ಬಗಳ ಸಂಖ್ಯೆ ಮತ್ತೆಲ್ಲೂ ಕಾಣಸಿಗದು ಪ್ರಕೃತಿಯ ಸಕಲವಸ್ತುಗಳನ್ನೂ, ಭಾರತೀಯ ಸಂಸ್ಕೃತಿ ಪೂಜಾ ದೃಷ್ಟಿಯಿಂದಲೇ ಕಾಣುತ್ತದೆ. ಈ ಪೂಜೆ, ಉತ್ಸವ, ಹಬ್ಬ, ಹರಿ ದಿನಗಳ ಹಿಂದೆ ಅಸಂಖ್ಯಾತ ಕಥಗಳೂ ರೂಪುಗೊಂಡಿವೆ.

ಶಿವರಾತ್ರಿಯ ಹಬ್ಬ ಆಗಮಿಸುತ್ತಿರುವಂತೆ ಚಳಿರಾಯ ಬೆದರಿ ಓಡುತ್ತಿದ್ದಾನೆ ಎಂಬ ನುಡಿಗಳು ಕೇಳಿ ಬರುತ್ತವೆ. ಶಿವರಾತ್ರಿ ಎಂಬುದು ಶಿವನ ಉಪಾಸನೆ, ಜಾಗರಣೆ ಧ್ಯಾನ ಜಪಾದಿಗಳಲ್ಲಿ ಕಳೆಯುವ ರಾತ್ರಿ ಎಂದೇ ಪ್ರತೀತಿ. ಅಂದಿನ ದಿನ ಶಿವಪೂಜೆಗೆ ಬಿಲ್ವವೃಕ್ಷದ ಎಲೆಗಳು ಶ್ರೇಷ್ಠವೆಂಬ ವಾಡಿಕೆ ಇದೆ. ಅಂದಿನ ದಿನ ಮಾಡಿದ ವ್ರತ ಉಪವಾಸ, ಕಥೆಗಳು ಯಾವ ಇನ್ನಿತರ ವ್ರತಗಳಿಗಿಂತ ಶ್ರೇಷ್ಠವೆಂಬ ನಂಬಿಕೆ ಇದೆ ಶಿವರಾತ್ರಿಗೆ ಸಂಬಂಧಿಸಿದ ಅಂಶಗಳು ಗರುಡ ಪುರಾಣ, ಪದ್ಮ ಪುರಾಣ, ಸ್ಕಂದ ಪುರಾಣ, ಹೇಮಾದ್ರಿ, ಮುಂತಾದ ಗ್ರಂಥಗಳಲ್ಲಿ ಕಂಡು ಬರುತ್ತವೆ.

ಬೇಡನೊಬ್ಬ ತನಗೆ ಅರಿವಾಗದಂತೆಯೇ ಶಿವ ರಾತ್ರಿಯಂದು ಶಿವಪೂಜೆಯನ್ನಾಚರಿಸಿ ಪರಮ ಪದವನ್ನೈದಿದ ಕಥೆ ಇಂತಿದೆ. ಸುಂದರ ಸೇನಕ ನೆಂಬ ಬೇಡರಾಜನೋರ್ವ ಒಂದು ದಿನ ಬೇಟೆಗೆಂದು ಕಾಡಿಗೆ ಹೊರಟ. ಆ ದಿನವೆಲ್ಲ ಬಾಯಾರಿ ಬಸವಳಿದು ಬಳಲಿದರೂ ಬೇಟೆ ಕೈಗೆ ಸಿಗಲಿಲ್ಲ, ರಾತ್ರಿಯಾಯಿತು. ಸಮೀಪದಲ್ಲಿದ್ದ ಬಿಲ್ವ ಮರವನ್ನೇರಿ ಯಾವುದಾದರೂ ಬೇಟೆ ದೊರಕಬಹುದೆಂಬ ಆಸೆ ಮತ್ತು ನಿರೀಕ್ಷೆಯಿಂದ ಎಚ್ಚರ ವಹಿಸಿ ಕುಳಿತನು ಹಾಗೆ ಕುಳಿತಾಗ ಆತನ ಕೈ ಅವನಿಗರಿಯದಂತೆಯೇ ಬಿಲ್ವ ವೃಕ್ಷದ ಎಲೆಗಳನ್ನು ಕಿತ್ತು ಕೆಳಗೆ ಹಾಕುತ್ತಿತ್ತು. ತಾನು ಎಸೆದ ಎಲೆಗಳು ಗಿಡದ ಬುಡದಲ್ಲಿದ್ದ ಲಿಂಗದ ಮೇಲೆ ಬಿದ್ದಿರುವುದೆಂಬ ಅರಿವು ಅವನಿಗಿರಲಿಲ್ಲ, ತನಗರಿಯದಂತೆಯೇ ತನ್ನ ಮುಖ ಪ್ರಾಕ್ಷಾಳನ ಮಾಡಿಕೊಂಡ ಲಿಂಗದ ಮೇಲೆ. ಹೀಗೆ ಲಿಂಗಕ್ಕೆ ಅಭಿಷೇಕವನ್ನೂ ಮಾಡಿದ, ಆ ದಿನವೆಲ್ಲ ನಿರಾಹಾರದಿಂದ ಇದ್ದು ಮರುದಿನ ಧೂಳಿನಿಂದಾವೃತವಾದ ತನ್ನ ದೇಹ ವನ್ನು ಮಿಂದು ಶುಚಿಯಾಗಿಸಿಕೊಂಡು ಆಹಾರ ವನ್ನು ಸ್ವೀಕರಿಸಿದ. ಇದರಿಂದ ಆತನಿಗೆ ಸುಲಭ ದಲ್ಲಿ ಮೋಕ್ಷ ಪ್ರಾಪ್ತಿಯಾಯ್ತು ಎಂಬ ಕಥೆ ಗರುಡಪುರಾಣದಲ್ಲಿ ಕಂಡು ಬರುತ್ತದೆ.

ಸ್ಕಾಂದ ಪುರಾಣ, ಪದ್ಮ ಪುರಾಣಗಳಲ್ಲಿಯೂ ಇದೇ ಬೇಡನ ಕಥೆಯ ರೂಪಾಂತರದಲ್ಲಿ ಕಾಣಬಹುದು. ಹೇಮಾದ್ರಿ ಗ್ರಂಥದಲ್ಲಿ ಮೃಗಶಿರಾ ನಕ್ಷತ್ರವನ್ನು ಶಿವರಾತ್ರಿಯ ದಿನ ಉಪವಾಸ ಮಾಡಿದ ಬೇಡನೆಂಬುದಾಗಿ ಗುರುತಿಸುವ ಅಂಶ ಬೆಳಕಿಗೆ ಬರುತ್ತದೆ

ಶಿವನ ದೂತರು ಶಕ್ತಿ ಗಣಗಳು. ಹೀಗಾಗಿ ಶಿವನ ಆರಾಧನೆ ಪೂಜಾದಿ ಉತ್ಸವಗಳು ರಾತ್ರಿಯೇ ಹೆಚ್ಚಾಗಿ ನಡೆಯುತ್ತವೆಂಬುದನ್ನು ಪೌರಾಣಿಕ ಗ್ರಂಥಗಳು ಸಮರ್ಥಿಸುತ್ತವೆ.

ಹಿಮಾಚಲ ಪ್ರದೇಶ, ನೇಪಾಳ, ಗೋವಾ, ಶ್ರೀಲಂಕಾ, ಗುಜರಾಥ್, ದಕ್ಷಿಣ ಭಾರತದ ಕನ್ಯಾಕುಮಾರಿ, ತಿರುಮಲೆ, ತಿಕ್ಕುರಸಿ, ಪದ್ಮನಾಭಪುರ, ಬದರೀನಾಥ, ಒರಿಸ್ಸಾದ ಭುವನೇಶ್ವರ ಇನ್ನೂ ಮುಂತಾದ ಅನೇಕ ಕಡೆ ಶಿವ ರಾತ್ರಿಯಂದು ಶಿವನ ಆರಾಧನೆಗೆಂದು ಸಹಸ್ರಾರು ಸಂಖ್ಯೆಯಲ್ಲಿ ಜನ ನೆರೆದಿರುತ್ತಾರೆ. ಹಿಮಾಚಲದ ಪ್ರದೇಶದಲ್ಲಿ ಶಿವನ ದೇವಸ್ಥಾನ ವನ್ನು ಭೂತನಾಥೇಶ್ವರ ದೇವಸ್ಥಾನವೆಂದೂ, ನೇಪಾಳದಲ್ಲಿ ಪಶುಪತಿ ದೇವಸ್ಥಾನವೆಂದೂ ಕಾಶಿ ಯಲ್ಲಿ ವಿಶ್ವನಾಥನೆಂದೂ, ಗೋವೆಯಲ್ಲಿ ಮಂಗೇಶ್ವರನೆಂದೂ ಪೂಜಿಸುತ್ತಾರೆ. ಗುಜ ರಾತಿನ ಈಶ್ವರ ದೇವಸ್ಥಾನದಲ್ಲಿ ಫೆಬ್ರವರಿ 14 ನೆಯ ತಾರೀಖಿಗೆ ಸಮನಾಗಿ ಶಿವರಾತ್ರಿಯ ಜಾತ್ರೆಯನ್ನೂ ಆಚರಣೆ ಮಾಡುವುದಲ್ಲದೆ ಭಜನೆ ಮಾಡುತ್ತಾರೆ. ಕರ್ನಾಟಕದಲ್ಲಿ ಇದ್ದಂತೆಯೇ ಶಿವರಾತ್ರಿಯ ದಿನ ಇಲ್ಲಿಗೆ ದೂರದ ಪ್ರದೇಶಗಳಿಂದ ದೇವಸ್ಥಾನಕ್ಕೆ ಆಗಮಿಸುತ್ತಾರೆ. ಗೋವೆಯ ಮಂಗೇಶ್ವರ, ಕಾಲ ಭೈರವ ದೇವಸ್ಥಾನಗಳಲ್ಲಿ ಶಿವನ ಅಭಿಷೇಕ ನಡೆಯುತ್ತದೆ. ರಾತ್ರಿಯೆಲ್ಲ ಎಚ್ಚರವಾಗಿದ್ದು ಶಿವನಿಗೆ ಧ್ಯಾನ ಜಪ ತಪಾದಿ ಗಳನ್ನು ಸಲ್ಲಿಸುತ್ತಾರೆ

ದಕ್ಷಿಣದಲ್ಲಿ ತಿರುಮಲೆ, ತಿಕ್ಕುರಸಿ, ತಿರುಪರಪ್ಪು ತಿರುನಂದಿಕ್ಕಾರೈ, ಪೊನ್ಮನ, ಪಣ್ಣಿಪಾಗಮ್, ಕಾಲ್ಕುಲಮ್, ಮೆಲಂಕೋಡು, ತಿರುವಿಡಯ್ಕೋಡು, ತಿರುವಿಳಂಕ್ಕೋಡು, ತಿರುನಾಚಲಮ್ ತಿರುಪ್ಪಾನಿಕ್ಕೋಡು, ಈ ಹನ್ನೆರಡು ಸ್ಥಳಗಳು ಶಿವದೇವಾಲಯಗಳಿಗೆ ಪ್ರಸಿದ್ಧವಾಗಿವೆ. ಈ ದೇವಾ


ಶ್ರೀಮತಿ

**ಟಿ. ವಿ. ಭುವನೇಶ್ವರೀ ಸುಂದರೇಶ್**

ಬಿ. ಎ.,

# ಸಪ್ತಗಿರಿ

ಬರಹಗಾರರಿಗೆ ಸೂಚನೆ:

ಸಪ್ತಗಿರಿ ಕನ್ನಡ ಮಾಸಪತ್ರಿಕೆ ಆಧ್ಯಾತ್ಮಿಕ ಸಾಂಸ್ಕೃತಿಕ ಪ್ರಸಾರದ ಉದ್ದೇಶ ಹೊಂದಿ ಹೊರಬರುತ್ತಿರುವ ಪತ್ರಿಕೆ. ಈ ಪತ್ರಿಕೆಯಲ್ಲಿ ಪ್ರಕಟಣೆಗಾಗಿ ಲೇಖನಗಳನ್ನು ಕವನ, ಕೀರ್ತನೆ, ಭಾವ, ಛಾಯಾ ಚಿತ್ರಗಳನ್ನು ಕಳುಹಿಸಬಯಸುವವರು ಕೆಳಗಣ ಸೂಚನೆಗಳನ್ನು ಗಮನಿಸಬೇಕು.

1) ಲೇಖನಗಳು ಆರು ಪುಲ್‌ಸ್ಕೇಪ್ ಹಾಳೆಗಳ ಮಿತಿಯಲ್ಲಿ ಹಾಳೆಯ ಒಂದೇ ಕಡೆ ಬರೆಯಲಾಗಿರಬೇಕು.

2) ದೇವಸ್ಥಾನ ಮೊದಲಾದ ಪ್ರಾಚ್ಯ ಅರ್ವಾಚೀನ ಸಾಂಸ್ಕೃತಿಕ ವಸ್ತು ವಿಷಯಗಳ ಬರಹಗಳು ತತ್ಸಂಬಂಧಿ ಫೋಟೋಗಳನ್ನೂ ಒಳಗೊಂಡಿದ್ದರೆ ಅನುಕೂಲಕರ.

3) ಚಿತ್ರಗಳನ್ನು ಇಂಡಿಯನ್ ಇಂಕಿನಲ್ಲೇ ಬರೆಯಬೇಕು.

4) ಕೇವಲ ಫೋಟೋಗಳನ್ನು ಮಾತ್ರವೇ ಕಳುಹಿಸುವವರು, ಸ್ಪಷ್ಟವಾದವುಗಳನ್ನು ಪೂರ್ತಿ ವಿವರಗಳೊಂದಿಗೆ ಕಳುಹಿಸಬೇಕು.

5) ಸಪ್ತಗಿರಿಯ ತೆಲುಗು, ತಮಿಳು, ಹಿಂದಿ, ಆಂಗ್ಲ ಭಾಷಾ ಪತ್ರಿಕೆಗಳಿಂದ ಅನುವಾದ ಲೇಖನಗಳು ಅಗತ್ಯವಿಲ್ಲ.

6) ಗೃಹಲಕ್ಷ್ಮಿ, ಕಿಶೋರಜಗತ್ ಮೊದಲಾದ ಶೀರ್ಷಿಕೆಗಳಿಗೆ ತಕ್ಕಂತಹ ಕಥೆ, ಪ್ರಬಂಧಗಳನ್ನೂ ಕಳುಹಿಸಬಹುದು.

7) ಪ್ರಕಟವಾದ ಲೇಖನಗಳಿಗೆ ಸೂಕ್ತ ಸಂಭಾವನೆ ಉಂಟು.

ಮಿಕ್ಕ ವಿವರಗಳಿಗೆ:

ಸಂಪಾದಕರು
ಸಪ್ತಗಿರಿ
ತಿ. ತಿ. ದೇವಸ್ಥಾನ, ತಿರುಪತಿ-517507
ಚಿತ್ತೂರು ಜಿಲ್ಲೆ, ಆಂ. ಪ್ರ.

ಲಯಗಳ ಕುರಿತಾದ ಅನೇಕ ಕಥೆಗಳು ಜನಜನಿತವಾಗಿವೆ. ಅಂತಹವುಗಳಲ್ಲಿ ಒಂದು ಕತೆ ಇಂತಿದೆ.

ಒಮ್ಮೆ ಯುಧಿಷ್ಠಿರ ಒಂದು ಯಜ್ಞದ ನಿರ್ವಹಣೆಗೆ ಪುರುಷಾಮೃಗದ ಹಾಲನ್ನು ಅಪೇಕ್ಷಿಸಿದನಂತೆ. ಪುರುಷಾಮೃಗ ಹೆಸರೇ ಸೂಚಿಸುವಂತೆ ಅರ್ಧಭಾಗ ಮಾನವನಾಗಿಯೂ ಅರ್ಧಭಾಗ ಪಶುವಾಗಿಯೂ ಇರುವಂತಹುದು, ಈ ಮೃಗ ಶಿವನನ್ನು ಮಾತ್ರ ಆರಾಧಿಸುತ್ತಿತ್ತು, ವಿಷ್ಣು ಮತ್ತು ವಿಷ್ಣುವಿನ ಭಕ್ತರ ಬಗ್ಗೆ ದ್ವೇಷವನ್ನು ಹೊಂದಿತ್ತು, ಈ ಮೃಗದಿಂದ ಹಾಲನ್ನು ತರುವ ಹೊಣೆಯನ್ನು ಹೊತ್ತವನು ಭೀಮ. ಭೀಮನ ಅಹಂ ಅನ್ನು ಇಳಿಸುವ ಯೋಚನೆಯಿಂದ, ಪುರುಷಾಮೃಗದಲ್ಲಿ ವಿಷ್ಣುವಿನ ಬಗ್ಗೆ ಭಕ್ತಿಯನ್ನು ಉಂಟುಮಾಡುವ ಸಲುವಾಗಿ ಕೃಷ್ಣ ಒಂದು ಉಪಾಯವನ್ನು ಹೂಡಿದ. ಶ್ರೀಕೃಷ್ಣ ಹನ್ನೆರಡು ಕಲ್ಲುಗಳನ್ನು ಭೀಮನಿಗೆ ಕೊಟ್ಟು ಪುರುಷಾಮೃಗದ ಬೇಟೆಗೆ ಕಳಿಸಿದ. ಕಷ್ಟಪರಿಸ್ಥಿತಿ ಒದಗಿದಾಗ ಕಲ್ಲೊಂದನ್ನು ಎಸೆಯಲು (ಕೆಳಗೆ ಹಾಕಲು) ಹೇಳಿ ಕಳುಹಿಸಿದ, ಭೀಮ ಅಂತೆಯೇ ಕಾಡಿಗೆ ಹೋಗಿ ಪುರುಷಾಮೃಗದ ಬಳಿ ಬಂದಾಗ ಗೋವಿಂದ, ಗೋಪಾಲ ಎಂದು ಉಚ್ಚರಿಸುತ್ತ ಹಾಲನ್ನು ಕರೆಯಲು ಮೊದಲು ಮಾಡಿದ, 'ಗೋವಿಂದ' ಎಂಬ ವಾಕ್ಯ ಕಿವಿಗೆ ಬಿದ್ದೊಡನೆ ಹೂಂಕರಿಸಲು ಮೊದಲು ಮಾಡಿತು. ವಿಷ್ಣು ನಾಮ ಸ್ಮರಣೆ ಕಿವಿಗೆ ಬಿದ್ದೊಡನೆ ಕೋಪದಿಂದ ಭೀಮನನ್ನು ಬಂಧಿಸಿತು, ಅದರ ಬಿಗಿ ಹಿಡಿತದಿಂದ ತಪ್ಪಿಸಿ ಕೊಳ್ಳಲು ಒಂದು ಕಲ್ಲನ್ನು ನೆಲಕ್ಕೆ ಹಾಕಿದ. ಆ ಕಲ್ಲಿನಿಂದ ಉದ್ಭವವಾಯಿತು ಒಂದು ಶಿವಲಿಂಗ, ಶಿವಲಿಂಗವನ್ನು ಪುರುಷಾಮೃಗ ಆರಾಧಿಸಲು ಮುಂದಾಯಿತು, ಹೀಗೆ ಪುರುಷಾಮೃಗದ ಹಿಡಿತದಿಂದ ತಪ್ಪಿಸಿಕೊಳ್ಳಲು ಎಸೆದ ಹನ್ನೆರಡು ಕಲ್ಲುಗಳೂ ಹನ್ನೆರಡು ಶಿವಲಿಂಗಗಳಾದವು. ಕಡೆಗೆ ಕಲ್ಲುಗಳೆಲ್ಲ ಮುಗಿದಾಗ ಭೀಮ ಪುರುಷಾಮೃಗದ ವ್ಯಾಪ್ತಿಗೆ ಒಳಗೊಂಡ ಪ್ರದೇಶದಿಂದ ಒಂದು ಹೆಜ್ಜೆ ಹೊರಗೆ ಇಟ್ಟ ಕಾರಣ ಪುರುಷಾಮೃಗದ ಹಿಡಿತದಿಂದ ತಪ್ಪಿಸಿ ಕೊಳ್ಳುವಂತಾದ. ಇದಕ್ಕೆ ಕಾರಣ ಯುಧಿಷ್ಠಿರನ ನ್ಯಾಯಬುದ್ಧಿ. ಅವನ ಧರ್ಮಬುದ್ಧಿಯನ್ನು ಮೆಚ್ಚಿದ ಪುರುಷಾಮೃಗ ಆಗ ಭೀಮನನ್ನು ತನ್ನ ಹಿಡಿತದಿಂದ ಬಿಡಿಸಿತು, ಪುರುಷಾಮೃಗದ ಶಿವಭಕ್ತಿಯು ಶಿವ, ವಿಷ್ಣುವಿನ ಮೇಲೆ ಏಕ ಪ್ರಕಾರವಾಗುವಂತೆ ಈ ಸನ್ನಿವೇಶ ಅನುಕೂಲಿಸಿತು. ಪುರುಷಾಮೃಗ ಭೀಮನನ್ನು ಅಟ್ಟಿಸಿಕೊಂಡು ಬಂದ ಸ್ಥಳ ತಿರುಮಲೆಯೆಂದೂ, ತಿರುನಟ್ಟಾಲಮ್‌ನಲ್ಲಿ ಅದು ಧರ್ಮರಾಜನ ಸನ್ನಡವಳಿಕೆಯಿಂದ ಪ್ರೇರಿತವಾಗಿ ಭೀಮನನ್ನು ಬಿಟ್ಟುಕೊಟ್ಟಿತೆಂದೂ ತಿಳಿದು ಬರುತ್ತದೆ.

ಶಿವರಾತ್ರಿಯಂದು ಅಸಂಖ್ಯಾತ ಭಕ್ತರು ತಾಡವೃಕ್ಷಗಳ ಎಲೆಗಳಿಂದ ಮಾಡಿದ ಚಾಮರವನ್ನು ಕೈಯಲ್ಲಿ ಹಿಡಿದು ದೇವರ ಸೇವೆಗೆಂದು 'ತಿರುಮಲೆ' ಯಿಂದ ಪ್ರಯಾಣ ಹೊರಟು ತಿರುನಟ್ಟಾಲಮ್‌ಗೆ ಬಂದು ಸೇರುತ್ತಾರೆ. ಶಿವರಾತ್ರಿಯಂದು ಹನ್ನೆರಡು ದೇವಸ್ಥಾನಗಳಲ್ಲೂ ವೈಭವದಿಂದ ಅಭಿಷೇಕ ಪೂಜಾ ಉತ್ಸವಾದಿಗಳು ಆಚರಿಸಲ್ಪಡುತ್ತವೆ

ಗುಜರಾತ್‌ನ ಸುರೇಂದ್ರನಗರ ಜಿಲ್ಲೆಯ ತ್ರಿನೇತ್ರೇಶ್ವರ ದೇವಾಲಯದಲ್ಲಿ ಶಿವರಾತ್ರಿಯು ಅದ್ದೂರಿಯಾಗಿ ಆಚರಿಸಲ್ಪಡುತ್ತದೆ ಜುನಾಗಢ್‌ನ ಭಾವನಾಥೇಶ್ವರ ಉತ್ಸವ ಫೆಬ್ರುವರಿ 14 ರಂದೇ ಆಚರಿಸಲ್ಪಡುತ್ತದೆ. ಅಲ್ಲಿ ನಡೆಯುವ ಜಾತ್ರೆಯ ಕುರಿತಾದ ಕತೆ ಹೀಗಿದೆ;

ಮಹಾಭಾರತದ ವೀರಾಗ್ರಣಿ ಅರ್ಜುನನ್ನು ಸ್ವಾಗತಿಸಲು ಶ್ರೀಕೃಷ್ಣ ಇಲ್ಲಿಯ ಶಿವನ ದೇವಾಲಯದ ಬಳಿ ವೈಭವ ಉತ್ಸವವನ್ನು ಆಚರಿಸಿದನಂತೆ. ಅಂದಿನಿಂದ ಪ್ರಚಲಿತವಿದೆಯೆಂದು ಹೇಳಲ್ಪಡುವ ಇಲ್ಲಿಯ ಜಾತ್ರೆಗೆ ಇಂದೂ ಅಸಂಖ್ಯಾತ ಮಂದಿ ಸೇರುತ್ತಾರೆ.

ಹಿಮಾಚಲ ಪ್ರದೇಶದ 'ಮಾಂಡಿ' ಎಂಬಲ್ಲಿ ಶಿವರಾತ್ರಿಯ ಆಚರಣೆಯನ್ನು ಒಂದು ವಾರದವರೆಗೂ ಆಚರಿಸುತ್ತಾರೆ, ಭೂತನಾಥ ದೇವಾಲಯದ ವೈಭವ, ಅಂದು ಮುಗಿಲು ಮುಟ್ಟಿರುತ್ತದೆ.

ಸಿಂಹಳದಲ್ಲೂ ಭಾರತೀಯ ಸಂಸ್ಕೃತಿಯ ಪೂಜಾ ವಿಧಾನವನ್ನು ಅನುಸರಿಸಿ ಶಿವರಾತ್ರಿಯಂದು ಜಾಗರಣೆ, ಧ್ಯಾನ ತಪಾದಿಗಳು ಆಚರಿಸಲ್ಪಡುತ್ತದೆ ಎಂದರೆ ಆಶ್ಚರ್ಯವೆನಿಸಬಹುದಲ್ಲವೆ.? ಆದರೆ ಇದು ಸತ್ಯ ಸಂಗತಿ, ತಿರುಕ್ಕುಟೇಶ್ವರಮ್ ದೇವಸ್ಥಾನದಲ್ಲಿ ಶಿವರಾತ್ರಿಯಂದು ವಿಶೇಷ ಪೂಜಾ ಸಂಭ್ರಮಾದಿಗಳು ನಡೆಯುತ್ತವೆ.

'ವೈವಿಧ್ಯತೆಯಲ್ಲಿ ಏಕತೆ' ಭಾರತೀಯ ಸಂಸ್ಕೃತಿಯ ಲಕ್ಷಣವಾಗಿದೆ. ಹಬ್ಬಗಳ ಮೂಲಕ ಜೀವನದ ಬನ್ನ ಬವಣೆಗಳನ್ನು ಮರೆಯುವ, ಜೀವನದ ಯಾಂತ್ರಿಕತೆಯಿಂದ ಉಲ್ಲಾಸದೆಡೆಗೆ ನಡೆಯಲು ಅನುಕೂಲವಾಗುತ್ತದೆ. ಸರಸ ಸಜ್ಜನಿಕೆಯಲ್ಲಿ ಪಾಲುಗೊಳ್ಳಲು ಭಾರತೀಯರಿಗೆ ಹಬ್ಬಗಳು ಒಂದು ಒಂದು ಸಾಧನವಿದ್ದಂತೆ. ಪ್ರತಿಯೊಂದು ಹಬ್ಬವೂ ದುಷ್ಟಶಕ್ತಿಯ ಮರ್ದನೆ, ಶಿಷ್ಟ ಶಕ್ತಿಯ ವರ್ಧನೆಯನ್ನೂ ಎತ್ತಿ ತೋರುತ್ತವೆ. ಹಬ್ಬಗಳ ಆಗಮನ ಪ್ರತಿಯೊಬ್ಬರಿಗೂ ಸಂತಸದಾಯಕ, ಭಾರತದ ಆದ್ಯಂತ ಎಲ್ಲೆಡೆಯಲ್ಲೂ ಏಕಪ್ರಕಾರವಾಗಿ ಆಚರಿಸುವ ಶಿವರಾತ್ರಿ ಆದೋ ಆಗಮಿಸುತ್ತಲೇ ಇದೆ, ಪ್ರತಿ ವರ್ಷವೂ ನವ ವಸಂತವನ್ನು ಚಿಗುರಿಸುತ್ತ ಆಗಮಿಸುತ್ತದೆ. ★

# ವಚನಗಳಲ್ಲಿ

# ಸತ್ಯ ದಾನ ಇತ್ಯಾದಿ

—ಶ್ರೀ ಕೆ. ಎಂ. ಅಚ್ಯುತಕುಮಾರ್

ಎಂಟು ಶತಮಾನಗಳ ಹಿಂದೆ ಕರ್ನಾಟಕದ ಕಲ್ಯಾಣ ಕ್ಷೇತ್ರದಲ್ಲಿ ವೀರಶೈವ ಅನುಭಾವಿಗಳ ಆಧ್ಯಾತ್ಮ ಮಂಥನದಿಂದ ಮೂಡಿಬಂದ ನವನೀತ ವಚನ ಸಾಹಿತ್ಯ. ವಚನಸಾಹಿತ್ಯದ ಮೂಲನೆಲೆ ಧರ್ಮ. ಧರ್ಮಪುರುಷನ ಮೂರು ಕಣ್ಣುಗಳು ತಾತ್ತ್ವಿಕ ವಿವೇಚನೆ, ಧಾರ್ಮಿಕ ಆಚರಣೆ, ನೈತಿಕ ನಿಯಮಗಳು. ಧಾರ್ಮಿಕ ಆಚರಣೆಯಲ್ಲಿ ನೀತಿಗೆ ಬಹಳ ಮಹತ್ವದ ಸ್ಥಾನವಿದೆ ಈ ವಚನ ಸಾಹಿತ್ಯದಲ್ಲಿ ನೀತಿಯ ನಿರೂಪಣೆ ಹೇರಳವಾಗಿದೆ. ಸತ್ಯ ಧರ್ಮ, ದಾನ, ಅಹಿಂಸೆ ಅಸ್ತೇಯ ಮೊದಲಾದುವು ನೀತಿಯ ನಿರೂಪಣೆಯ ವಲಯದೊಳಗೆ ಬರುವಂತಹವು ಇವು ನಿತ್ಯ ಬದುಕಿನಲ್ಲಿ ಬೆರೆತರೆ ಮಾನವನು ಮಾಧವನಾಗುತ್ತಾನೆ. ಈ ಸದ್ಗುಣಗಳನ್ನು ಕನ್ನಡದ ಉಪನಿಷತ್ತುಗಳು ಎನಿಸಿದ ಮಾಣಿಕ್ಯಗಳಿಂದ ಪರಿಚಯಿಸಿಕೊಡಲು ಪ್ರಯತ್ನಿಸಲಾಗಿದೆ ಇಲ್ಲಿ.

## ಸತ್ಯ

'ಸತ್ಯ' ಎಂದರೆ ಯಾವುದು ಇರುವುದೋ, ಯಾವುದು ಎಲ್ಲವೂ ಆಗಿದೆಯೋ ಅದೇ ಸತ್ಯ. ಸತ್ಯ ನುಡಿಯುವುದು ಮನುಜ ಧರ್ಮ. ಉತ್ತಮರು ಎಂಬರು ಸತ್ಯದಲ್ಲಿ ನಡೆಯುವರು. ಸತ್ಯ ನುಡಿಯುವುದರಿಂದ ಒಬ್ಬನ ವ್ಯಕ್ತಿತ್ವ ಪ್ರಕಟವಾಗುವುದು. ಋಜುವಿನಿಂದ ವ್ಯಕ್ತಿ ಶ್ರೇಷ್ಠನಾಗುತ್ತಾನೆ. ಉದಾಹರಣೆಗೆ ಕರ್ಣ, ಶ್ರೀರಾಮ ಮೊದಲಾದವರನ್ನು ಹೆಸರಿಸಬಹುದು ಸತ್ಯನುಡಿಯುವುದೊಂದೆ ಅಲ್ಲ ನುಡಿದಂತೆ ನಡೆದುಕೊಳ್ಳಬೇಕು ಆದರಿಂದ (ನುಡಿ ನಡೆಯನ್ನು ಹಿಡಿದು) ವ್ಯಕ್ತಿಯ ವ್ಯಕ್ತಿತ್ವವನ್ನು ಅಂದರೆ ಗುಣ ಶೀಲಗಳನ್ನು ಅಳೆಯಬಹುದು. ಒಂದೇ ಮಾತಿನಲ್ಲಿ ಹೇಳುವುದಾದರೆ ಸತ್ಯ ಶೀಲದ ತಿರುಳು. ಸತ್ಯವನ್ನು ನುಡಿಯುವುದರಿಂದ ಇಹ–ಪರಗಳೆರಡರಲ್ಲೂ ಪ್ರಯೋಜನ, ಫಲವುಂಟು. ಸತ್ಯವನ್ನು ನುಡಿಯುವುದರಿಂದ ದೊರೆಯುವ ಫಲ ಅಪಾರವೂ, ಅಮೂಲ್ಯವೂ ಆದುದು ಅಸತ್ಯವನ್ನು ನುಡಿಯುವುದರಿಂದ ಆತ್ಮ ವಂಚನೆ, ಅಧಃ ಪತನ, ಅಧೋಗತಿ. ಸತ್ಯವು ದೇವರಿಗೆ ಪ್ರಿಯವಾದದು. ಸತ್ಯವೇ ಪರಮಾತ್ಮ ಸ್ವರೂಪ ಉಪನಿಷತ್ತಿನಲ್ಲಿ ದೇವರಿಗೆ ಹೇಳಿದ ಲಕ್ಷಣಗಳಲ್ಲಿ ಮೊದಲು 'ಸಚ್ಚಿದಾನಂದ' ಎಂದಿದೆ. 'ಸತ್ಯವೇ ದೇವರು' 'ಸತ್ಯಮೇವ ಜಯತೆ' 'ಸತ್ಯವೇ ಶಿವನ ಆವಾಸಸ್ಥಾನ' ಈ ವಾಕ್ಯಗಳು ಸತ್ಯದ ಮಹತ್ವವನ್ನು ಸಾರುತ್ತಿವೆ. "ಸತ್ಯವಿಲ್ಲದವ ಕೊಡನೆ ಸಹಸ್ರಕ್ಕೊಮ್ಮೆ ನುಡಿಯಲಾಗದು, ಲಕ್ಷಕ್ಕೊಮ್ಮೆ ನುಡಿಯಲಾಗದು, ಕೋಟಿಗೊಮ್ಮೆ ನುಡಿಯಲಾಗದು" ಎಂದು ಅಲ್ಲಮ ಪ್ರಭು ಸತ್ಯದ ಮಹತ್ವವನ್ನು ಎತ್ತಿ ಹಿಡಿದಿದ್ದಾನೆ 'ಸತ್ಯದ ಮನೆಯಲ್ಲಿ ಶಿವನಿರ್ಪನಲ್ಲದೆ ಅಸತ್ಯದ ಮನೆಯಲ್ಲಿ ಶಿವನಿರ್ಪನೆ' ಎಂದು ಶಿವಶರಣರು ಕೇಳುತ್ತಾರೆ. ರಾಘವಾಂಕ ಕವಿ ಹರಿಶ್ಚಂದ್ರ ಕಾವ್ಯದಲ್ಲಿ "ಹರನೆಂಬುದೆ ಸತ್ಯ, ಸತ್ಯವೆಂಬುದೆ ಹರನು ಎಂದು ಹೇಗೆ ಹರಿಶ್ಚಂದ್ರನು ಸತ್ಯಕ್ಕಾಗಿ ಪಡಬಾರದ ಕಷ್ಟಗಳನ್ನು ಅನುಭವಿಸಿದರೂ, ಸತ್ಯದ ತೇಜಸ್ಸಿನಿಂದಲೇ ಯಶೋಭಾಗಿಯಾದನು ಎನ್ನುವುದನ್ನು ಸುಂದರವಾಗಿ ನಿರೂಪಿಸಿರುವನು ಸತ್ಯದ ವಿಷಯದಲ್ಲಿ 'ದೇರ್ ಹೈ ಲೇಕಿನ್ ಅಂಧೇರ್ ನಹಿ' ಎನ್ನುವುದು ದಿಟ. ಸತ್ಯವರ್ತನೆಯಿಂದ ಕೊನೆಯಲ್ಲಿ ಸುಖ ಲಭಿಸುವುದು ನಿಶ್ಚಯ ಗಾಂಧೀಜಿಗೆ ಅಹಿಂಸೆಯೇ ಸತ್ಯವಾಯಿತು. ದಾನವಮಾಡುವುದೇ ಕರ್ಣನಿಗೆ ಸತ್ಯದ ಹಾದಿಯಾಯಿತು. ಬಸವಣ್ಣನವರ ದಿವ್ಯ ಜೀವನ ಚರಿತ್ರೆಯೇ 'ಸತ್ಯ' ಎನ್ನಬಹುದು ಅಣ್ಣನವರು ಎಂದೂ ಸತ್ಯವನ್ನು ಬಿಡಲಿಲ್ಲ. ಸತ್ಯವನ್ನೇ ಹೇಳಬೇಕು, ಅಸತ್ಯವನ್ನು ಹೇಳಬಾರದೆಂದರು 'ಸತ್ಯವ ನುಡಿವುದೇ ದೇವಲೋಕ ಮಿಥ್ಯವ ನುಡಿವುದೇ ಮರ್ತ್ಯಲೋಕ' ಎಂದು ಸತ್ಯದ ಮಹತ್ವವನ್ನು ಸಾರಿದರು. "ಜಂಬೂ ದ್ವೀಪ ನವಖಂಡ ಪೃಥ್ವಿಯೊಳಗೆ ಕೇಳಿರಯ್ಯ ಎರಡಾಳಿನ ಭಾಷೆಯ. ಕೊಲುವೆನೆಂಬ ಭಾಷೆ ದೇವನದು ಗೆಲುವನೆಂಬ ಭಾಷೆ ಭಕ್ತನದು ಸತ್ಯವೆಂಬ ಕೂರಲಗ ಕಳೆದುಕೊಂಡು ಸದ್ಭಕ್ತರು ಗೆದ್ದರು ಕಾಣಾ ಕೂಡಲ ಸಂಗಮದೇವ" ಎಂದು ಹೇಗೆ ಪುರಾತನ ಶರಣರು ಸತ್ಯವೆಂಬ ಖಡ್ಗವನ್ನು ಹಿಡಿದು ಯಶಸ್ವಿಯಾಗಿದ್ದಾರೆ ಎನ್ನುವುದನ್ನು ನಿರೂಪಿಸಿರುವರು. ಸತ್ಯದಲ್ಲಿ ನಡೆಯುವವರು ಉತ್ತಮರು ಎಂದಿದ್ದಾನೆ ಸರ್ವಜ್ಞ.

## ದಾನ

ದಾನ ಎಂದರೆ ಪರರ ಕಷ್ಟಗಳನ್ನು ಪರಿಹಾರ ಮಾಡುವುದು ಎಂದರ್ಥ ಪರಸ್ಪರ ಸಹಾಯದ ವಿನಿಮಯವಿಲ್ಲದೆ ಸಮಾಜ ಸಾಗುವುದು ಸಾಧ್ಯವಿಲ್ಲ ವ್ಯಕ್ತಿ ಸಮಾಜ ಜೀವಿಯಾಗಿ ಸರ್ವರೊಡಗೂಡಿ ಬಾಳಿ, ಸಂಪಾದಿಸಿದುದನ್ನು ತನ್ನ ಸಹಜೀವಿಗಳೊಂದಿಗೆ ಹಂಚಿ ತಿನ್ನಬೇಕು ಇದನ್ನೇ ದಾನ, ತ್ಯಾಗ ಎನ್ನುವುದು ಧರ್ಮದ ಸಾರಸರ್ವಸ್ವ ದಾನದಲ್ಲಿ ಅಡಗಿದೆ ದಾನವಮಾಡುವುದು ಲೌಕಿಕ, ಅಲೌಕಿಕ, ಸಾಮಾಜಿಕ ಜೀವನಕ್ಕೆ ಮದ್ದು "ಉಪನಿಷತ್ತುಗಳು ನಿನ್ನ ನೆರೆ ಹೊರೆಯವರನ್ನು ನಿನ್ನಂತೆ ಭಾವಿಸು ಎಂದು ಬೋಧಿಸುತ್ತವೆ ಕನ್ನಡದ ಉಪನಿಷತ್ತುಗಳು "ನಿನ್ನ ಆತ್ಮ, ಅನ್ಯರ ಆತ್ಮ (ವೈರಿಗಳ ಆತ್ಮವೂ ಸೇರಿ) ಒಂದೇ" ಎಂದು ಹೇಳುತ್ತವೆ. ಪಶುಪಕ್ಷಿಗಳೂ ಸಹ ತಮ್ಮ ಬಳಗಕ್ಕೆ ವಿಪತ್ತು ಬಂದಾಗ ಇನ್ನೊಂದನ್ನು ರಕ್ಷಿಸುವುದಕ್ಕೆ ಸೇರುತ್ತವೆ. "ಕಾಗೆಯೊಂದಗಳ ಕಂಡರೆ ಕರೆಯದೆ ತನ್ನ ಬಳಗವನು ? ಕೋಳಿಯೊಂದು ಕುಟುಕ ಕಂಡರೆ ಕೂಗಿ ಕರೆಯದೆ ತನ್ನ ಕುಲವೆಲ್ಲವನ್ನು ?" ಎನ್ನುವ ವಚನದಲ್ಲಿ ಅಣ್ಣನವರು ಪಕ್ಷಿಲೋಕದಲ್ಲಿರುವ ಪರೋಪಕಾರ ಬುದ್ಧಿಯನ್ನು ಗುರುತಿಸಿದ್ದಾರೆ. ಪರೋಪಕಾರದಿಂದ ಆತ್ಮೋನ್ನತಿಯಾಗುತ್ತದೆ. ಅದೇ ಸ್ವಾರ್ಥಬುದ್ಧಿಯಿಂದ ಪರಪೀಡನೆಯಾಗುತ್ತದೆ 'ದಾನದಿಂದ ಕಡೆಮೊದಲಿಲ್ಲದ ಪದವು ದೊರೆಕೊಂಬುದು" ಎಂದು ಷಣ್ಮುಖ ಸ್ವಾಮಿ ಹೇಳಿರುವನು. ಆದ್ದರಿಂದ 'ಮಾಡಿ ಭೋ ಎಲ್ಲವೂ ಸವೆಯಿತ್ತು ಹೋಯಿತ್ತು ಎಂಬ ಚಿಂತೆ ಸಂತೋಷವಿಲ್ಲದೆ ಮಾಡಿ ಭೋ ನಮ್ಮ ಸಕಲೇಶ್ವರ ದೇವನರಿದು ಸಲಹುವನಾಗಿ" ಎಂದು ಸಕಲೇಶ ಮಾದರಸ ತಿಳಿವಳಿಕೆ ಕೊಟ್ಟಿರುವನು. ಎನಿಲ್ಲ ಎಂದರೂ 'ದಾನ ಶಿವನಲ್ಲಿ ಕಟ್ಟಿಟ್ಟ ಬುತ್ತಿ' ಎನ್ನುವ ಸರ್ವಜ್ಞನ ಮಾತು ಇದ್ದೇ ಇದೆ. ವಚನಗಳಲ್ಲಿ ವಿನಯದ ಮಾತೂ ಕೂಡಾ ಪರೋಪಕಾರವೆಂದು ಪರಿಗಣಿಸಲ್ಪಟ್ಟಿದೆ. ನಯನುಡಿಯಿಂದ ಪ್ರೇಮ ಹುಟ್ಟುವುದು. ವೈರಿಯೂ ಕೂಡಾ ಪ್ರೀತಿಯಿಂದ ಮಿತ್ರನಾಗುವನು. ಈ ನಯದ ನುಡಿಯೂ ವಿನಯ

ಇದುವೇ ಭಕ್ತಿರೂಪ. ಈ ಭಕ್ತಿಯಿಂದ ತನುಮನ ಧನಗಳನ್ನು ನಿಷ್ಕಾಮ ಬುದ್ಧಿಯಿಂದ ಭಗವಂತನಿಗೆ ಅರ್ಪಿಸಿ ಒಂದಾಗಲಿಚ್ಛಿಸುವನು ಬಸವಣ್ಣನವರು ಈ ತ್ಯಾಗಬುದ್ಧಿಯನ್ನು "ಎನ್ನ ಕಾಯವ ದಂಡಿಗೆಯ ಮಾಡಯ್ಯ ಎನ್ನ ಶಿರವ ಸೋರೆಯ ಮಾಡಯ್ಯ ಎನ್ನ ನರವ ತಂತಿಯ ಮಾಡಯ್ಯ ಎನ್ನಬೆರಲ ಕಡ್ಡಿಯ ಮಾಡಯ್ಯ ಬತ್ತೀಸರಾಗವ ಹಾಡಯ್ಯ ಉರದಲೊತ್ತಿ ಬಾಜಿಸು ಕೂಡಲ ಸಂಗಮ ದೇವ" ಎಂದು ಚಿತ್ರಿಸಿದ್ದಾರೆ

## ಆಸೆ

ಯಾವುದೇ ಧರ್ಮಕ್ಕೆ ನೀತಿ ಎಂದರೆ ಉತ್ತಮ ನಡತೆ ಅಲ್ಲದೆ ಬೇರೇನೂ ಅಲ್ಲ ಜನ ಜೀವನದ ಸುಭದ್ರತೆಗೆ ನೀತಿಯೇ ನೆಲಗಟ್ಟು. ನೈತಿಕ ಜೀವನದಲ್ಲಿ ನೀತಿಗೆ ಬಹಳ ಮಹತ್ವದ ಸ್ಥಾನವಿದೆ ನೀತಿ ಧರ್ಮ ಬೇರೆ ಬೇರೆ ಅಲ್ಲ ನೀತಿಯಿಲ್ಲದ ಧರ್ಮ, ಧರ್ಮವಿಲ್ಲದ ನೀತಿ ಸಾರ್ಥಕವಾಗಲಿ, ಫಲಕಾರಿಯಾಗಲಿ ಅಲ್ಲ ನೀತಿ ಬೀಜವಾದರ ಅದರಿಂದ ಹುಟ್ಟಿದ ಫಲ ಧರ್ಮ ಎನ್ನಬಹುದು ನೀತಿಯನರಿದ ಮನುಷ್ಯನು ಜಗದೊಳಗೆ ಜ್ಯೋತಿಯಿದ್ದಂತೆ. ಮನುಷ್ಯನಲ್ಲಿ ನೀತಿ ನೆಲೆಸಬೇಕಾದರೆ ಮೊದಲು ಆಶಾ ಪಾಶಗಳ ಬಂಧನಗಳನ್ನು ಬಿಡಿಸಿಕೊಳ್ಳಬೇಕು ಸಾಮಾನ್ಯವಾಗಿ ಸಕಲ ಪಾಪಗಳಿಗೂ ಆಸೆಯೇ ಮೂಲವಾಗಿರುತ್ತದೆ ಆಸೆಯನ್ನು ತೃಪ್ತಿಪಡಿಸುವುದು ಎಂದಿಗೂ ಸಾಧ್ಯವಿಲ್ಲ. "ಧರೆ ದಿಸೆ ವಳಯವೆಲ್ಲ ತನಗಾದಡಂ ನಿಲ್ಲಳ.. ಇನಿತು ತ್ರಿಭುವನ ರಾಜ್ಯ ಪದಂಗಳು ತನಗಾದಡಂ ನಿಲ್ಲಳು ಅನಿತರೊಳು ತೃಪ್ತಿ ಪಡೆಯಳು ಈ ಆಸೆಯೆಂಬ ಪಾತಕಿ" ಎನ್ನುತ್ತಾನೆ, ಸಿದ್ಧರಾಮ ಆಸೆಗೆ ಅಡ್ಡಿ ಬಂದಾಗ ಕೋಪ, ಕೋಪದಿಂದ ಅನರ್ಥ ಪರಂಪರೆಗಳಾಗುತ್ತವೆ ಎಂದೇ ಅನಂತ ಆತಂಕಗಳಿಗೆ ಬೀಜರೂಪವಾದ ಆಸೆಯನ್ನು ತ್ಯಜಿಸಬೇಕು. ಇಲ್ಲದೆ ಹೋದರೆ ಅದರ ಪರಿಣಾಮವಾಗಿ ಕೊನೆಗೆ ದುಃಖಬರುವುದು. ದುಃಖದ ನಿವಾರಣೆಗಾಗಿ, ಆಸೆಗಳನ್ನು ಸಂತೃಪ್ತಿಗೊಳಿಸುವುದಕ್ಕಾಗಿ ನಾವು ದಾಸರಾಗ ಬೇಕಾಗುತ್ತದೆ ಆದ್ದರಿಂದ ಅಂಬಿಗರ ಚೌಡಯ್ಯನು "ಆಸೆಯುಳ್ಳಾತರೊಬ್ಬರಾಧೀನದಲ್ಲಿಪ್ಪನು ಆಸೆಯ ಮೊನೆಯ ಕೊನೆಯನರಿದಾತ ಕೈಲಾಸದಲ್ಲಿಪ್ಪ" ಎಂದು ನಡೆದಿರುವನು. ಇದನ್ನೇ ಉರಿಲಿಂಗ ಪೆದ್ದಿಯು "ಆಸೆಯೆ ದಾಸತ್ವ ನಿರಾಸೆಯೆ ಈಶತ್ವ" ಎಂದು ಹೇಳಿರುವನು. ಆಸೆಗಳು ಎಂದರೆ ನಾವೇ ಕಲ್ಪಿಸಿಕೊಂಡ ಬಲೆಗಳು ಕಡೆಗೆ ಅದರಲ್ಲಿ ಬಿದ್ದು ನರಳಾಡುವರೂ ನಾವೇ. ಆದ್ದರಿಂದ ಇಂತಹ ಬಲೆಯಿಂದ ಬಿಡಿಸು ಎಂದು ಅಕ್ಕಮಹಾದೇವಿ "ತೆರಣಿಯ ಹುಳು ತನ್ನ ಸ್ನೇಹದಲ್ಲಿ ಮನೆಮಾಡಿ ತನ್ನನೂಲು ತನ್ನ ಸುತ್ತಿ ಸಾವ ತೆರನಂತೆ ಮನ ಬಂದುದ ಬಯಸಿ ಬೇವುತ್ತಿದ್ದೇನೆ ಅಯ್ಯಾ ! ಎನ್ನ ಮನದ ನಿರಾಸೆಯ ನಿವಾರಿಸಿ ನಿಮ್ಮತ್ತ ತೋರಾ ಚನ್ನ ಮಲ್ಲಿಕಾರ್ಜುನ" ಎಂದು ಬೇಡಿಕೊಂಡಿರುವಳು."ಕಂಣ ಮುಂದಣ ಕಾಮನಕೊಂದು ಮನದ ಮುಂದಣ ಆಸೆಯ ತಿಂದು ಆತನನರಿ ಆತುರಿವೈರಿ ಮಾರೇಶ್ವರಾ" ಎಂದು ನಗೆಯಮಾರಿತಂದೆ ಬುದ್ಧಿ ಹೇಳಿರುವನು. ಒಟ್ಟಾರೆ ಶುದ ಜೀವಿಗೆ ಆಸೆ ಸಲ್ಲದು.



## ಸದಾಚಾರ

ಉತ್ತಮವಾದ ನೀತಿಯಿಂದ ನಡೆಯುವುದೇ ಸದಾಚಾರ ಅಥವಾ ಶೀಲ. ಸದಾಚಾರ ನಿಜವಾದ ಮನುಷ್ಯತ್ವದ ಅಳತೆಗೋಲು ಸದಾಚರಣೆಯಿಂದ ವ್ಯಕ್ತಿ ತನ್ನ ದುರ್ಗುಣ, ದೌರ್ಬಲ್ಯ, ದ್ವೇಷಗಳನ್ನು ಕಳೆದುಕೊಳ್ಳಬೇಕು. ಧರ್ಮ ನೀತಿ ಸದಾಚಾರಗಳು ಕೇವಲ ಬೋಧನೆಗಾಗಿ ಅಲ್ಲ, ಅವುಗಳು ಆಚರಣೆಯಲ್ಲಿ ವ್ಯಕ್ತವಾಗಬೇಕು ಮಾಡುವುದು ಅನಾಚಾರ, ಮಾತಾಡುವುದು ಸದ್ವಿಚಾರ ಆಗಬಾರದು ಮಾತಾನಾಡುವುದಕ್ಕೂ ಮಾಡುವುದಕ್ಕೂ ತಾಳ-ಮೇಳವಿರಬೇಕು. ನುಡಿಯನ್ನು ಅಂಗೀಕರಿಸಿ ಅಳವಡಿಸಿಕೊಂಡು ಆಚರಿಸಬೇಕು ಏಕೆಂದರೆ ಮನಸ್ಸು ಮಾತಿಗೆ ಮುಂದು ಆಚರಣೆಗೆ ಹಿಂದು. ಆಚರಣೆಗೆ ತರಲಾರದ ನುಡಿ ಎಷ್ಟೇ ಮಹತ್ವದ್ದಾಗಿದ್ದರೂ ನಿಷ್ಪ್ರಯೋಜನ ಸದಾಚಾರ ಪಾಲನ ಒಳಿತಿಗೆ ಮೂಲ ಚೆನ್ನ ಬಸವಣ್ಣನವರು ಐವತ್ತು ಆಚರಣೆಗಳನ್ನು ಉಲ್ಲೇಖಿಸಿದ್ದಾರೆ ಉದಾ: ಪರರ ಹೆಣ್ಣಿಗೆ ಕಣ್ಣಿಡದಿರುವುದು, ವಿಶ್ವಾಸಘಾತ ಮಾಡದಿರುವುದು ಇತ್ಯಾದಿ "ಲಾಂಛನಕ್ಕೆ ಶರಣೆಂಬೆ, ಲಾಂಛನಕ್ಕೆ ತಕ್ಕ ಆಚಾರವಿಲ್ಲದಿದ್ದರೆ ಛೀ ಎಂಬೆ" "ನುಡಿಗೆ ತಕ್ಕ ನಡೆಯಕಂಡರೆ ಕೂಡಲಸಂಗಮ ದೇವನೊಳಗಿಪ್ಪನಯ್ಯ" ಎಂದು ಬಸವಣ್ಣನವರು ನುಡಿದರು ಸದಾಚಾರವೆಂಬುದು ಅಂತರಂಗಶುದ್ಧಿಗೂ, ಸತ್ಕ್ರಿಯಾಚರಣೆಗೂ ಸಮೀಪ ಸಂಬಂಧವುಳ್ಳದ್ದೆಂದು "ಇದ್ದುದ ವಂಚನೆಯ ಮಾಡದಿಪ್ಪುದೇ ಶೀಲ, ಇಲ್ಲದುದಕೆ ಕಡನ ಮಾಡದಿಪ್ಪುದೇ ಶೀಲ ಪರಧನ, ಪರಸ್ತ್ರೀಯರ ಮುಟ್ಟದಿಪ್ಪುದೇ ಶೀಲ" ಎಂಬುದು ಚೆನ್ನಬಸವಣ್ಣನವರ ನಿಲುವು. "ಸತ್ಯದಲಿ ನಡೆವುದು ಶೀಲ,ಸತ್ಯದಲಿ ನುಡಿವುದು ಶೀಲ,ಸಜ್ಜನ ಸದಾಚಾರದಲಿ ವರ್ತಿಸಿ ಸತ್ಯವನರಿವುದೇ ಶೀಲ ಕಾಣಿರೋ ಮಹಾಲಿಂಗಗುರು ಶಿವಸಿದ್ಧೇಶ್ವರ ಪ್ರಭುವೆ" ಎಂದು ತೋಂಟದ ಸಿದ್ಧಲಿಂಗಯತಿ ಘೋಷಿಸಿರುವನು. ಇನ್ನೊಂದೆಡೆ ಸಿದ್ಧಲಿಂಗೇಶ್ವರ ಯತಿ "ಜ್ಞಾನ ರಹಿತನಾಗಿ ಕ್ರಿಯೆಯನೆಷ್ಟು ಮಾಡಿದರೇನು? ಅದು ಕಣ್ಣಿಲ್ಲದವನ ನಡತೆಯಂತೆ. ಕ್ರಿಯಾರಹಿತನಾಗಿ ಜ್ಞಾನಿಯಾದೊಡೇನು? ಅದು ಕಾಲಿಲ್ಲದವನ ಇರವಂತೆ ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರನ ನಿಜವ ಬೆರಸುವಡೆ ಜ್ಞಾನವೂ ಕ್ರಿಯೆಯೂ ಎರಡೂ ಬೇಕು" ಎಂದಿರುತ್ತಾನೆ.

ಸ್ವತಃ ತಾನು ನೀತಿಯಿಂದ ನಡೆಯುವುದು ಮಾತ್ರವಲ್ಲದೆ ತನ್ನ ಸುತ್ತ ಮುತ್ತಲಿನವರು ಅದರಂತೆ ಮಾಡಬೇಕೆಂದು "ತಾ ಶಿವಭಕ್ತನಾಗಿ ತನ್ನ ಬಂಧುಗಳ ಭವಿಯತನದಲ್ಲಿರಿಸಬಾರದಯ್ಯ.ಮಾತಿನಿಂದಾಗಲೀ, ಮನದಿಂದಾಗಲಿ, ಭೀತಿಯಿಂದಾ

ಗಲೀ, ಶಿವಭಕ್ತಿಯಲ್ಲಿಪೂರೈಸುವುದಯ್ಯ 'ಅತಿ ಸ್ಥಿ ಯಾನ್ವಿದಾನ್ ಭೋಗಾನ್ ಸ್ತ್ರೀ ಪುತ್ರ-ಪ್ರಮುಖಾನಪಿ' ಎಂದು ನುಡಿದ ನುಡಿಯ ನೋಡಾ ಕಪಿಲಸಿದ್ಧ ಮಲ್ಲಿಕಾರ್ಜುನಾ" ಎಂದು ಸಿದ್ಧರಾಮ ಹೇಳಿರುವನು ನೀತಿಯಿಂದ ನಡೆಯಬೇಕಾದರೆ ಸಮತಾಭಾವವಿರಬೇಕು ಕೋಪ ತಾಪಗಳಿಂದ ಕುದಿಯದೆ, ಹೊಗಳಿಕೆಯಿಂದ ಉಬ್ಬದೆ, ತೆಗಳಿಕೆಯಿಂದ ಕುಗ್ಗದಿರುವುದೇ ಸಮತೆ. ಸಮತಾಭಾವದಿಂದ ಅಹಂಕಾರ ನಿಃಸನವಾಗುತ್ತದೆ, ಆತ್ಮನಿಂದೆ ಹಿತವಾಗುತ್ತದೆ, ಸ್ತುತಿ ಅಸಹ್ಯವಾಗುತ್ತದೆ "ಆರು ಜರಿದರೂ ಅವರೆನ್ನ ಮನದ ಕಾಳಿಕೆಯ ಕಳೆದರೆಂಬುದೇ ಸಮತೆ ಆರು ಸ್ತೋತ್ರ ಮಾಡಿದರೆನ್ನ ಜನ್ಮದ ಹಗೆಗಳೆಂಬುದೇ ಸಮತೆ ಕಪಿಲಸಿದ್ಧ ಮಲ್ಲಿಕಾರ್ಜುನ" ಎಂದು ಸಿದ್ಧರಾಮನು ಸಮತೆಯ ಸಮರ್ಪಕ ವ್ಯಾಖ್ಯಾನ ಮಾಡಿದ್ದಾನೆ. ಬಸವಣ್ಣನವರೂ ಕೂಡಾ "ಹೊಯ್ದವರೆನ್ನ ಜನ್ಮ ಬಂಧುಗಳೆಂಬೆನು ಹೊಗಳಿದವರೆಲ್ಲ ಹೊನ್ನ ಶೂಲದಲಿಕ್ಕಿದರು ಕೂಡಲಸಂಗಮ ದೇವ" ಎಂದಿರುವುದನ್ನು ಗಮನಿಸಬಹುದು ಅಹಂಕಾರ ವ್ಯರ್ಥವಾದುದು ಅಹಂಕಾರದಿಂದ ಪ್ರಪಂಚಕ್ಕೆ ಪ್ರಾರಂಭ. ಪರಮಾತ್ಮ ಭಾವದಿಂದ ಪ್ರಪಂಚಕ್ಕೆ ಪರ್ಯವಸಾನ. ಅಹಂಕಾರದಿಂದ ಅನಿಷ್ಟ, ಅಹಂಕಾರದಿಂದ ಭವ ಬಂಧನ ಮೋಕ್ಷ ದೂರ ಮಾನವ ಮತ್ತು ದೈವೀ ಪ್ರೀತಿಗೆ ಪ್ರತಿಬಂಧಕವಾಗಿರುವುದು ದುರಹಂಕಾರ ಇದರಿಂದ ತನಗೆ ಒಳ್ಳೆಯದಾದರೆ ಸಾಕು ಪರರಿಗೆ ಕೆಡುಕಾದರೆ ಪರವಾಗಿಲ್ಲ ಎನ್ನುವ ಅನೀತಿ ಕಾರ್ಯಗಳು ದುಷ್ಟ ಬುದ್ಧಿಯಿಂದ ಹುಟ್ಟುತ್ತವೆ. ಆದ್ದರಿಂದ ಈ ಕ್ಷುದ್ರ ಅಹಂಕಾರವನ್ನು ಲವಲೇಶವೂ ಇಲ್ಲದಂತೆ ಸಮೂಲವಾಗಿ ಚಿವುಟಿ ಹಾಕಬೇಕು. "ಅಹಂ ಎಂಬುದೇ ದೇಹ, ದಾಸೋಹಂ ಎಂಬುದೇ ನಿರ್ದೇಹ. ಅಹಂಭಾವವಳಿದವರ ಕೂಡಲ ಚನ್ನಸಂಗಯ್ಯನಲ್ಲಿ ನಿರ್ದೇಹಿಗಳೆಂಬೆ" ಎಂದು ಚನ್ನ ಬಸವಣ್ಣ ಅಹಂಕಾರದ ಸ್ವರೂಪವನ್ನು ವರ್ಣಿಸಿದ್ದಾನೆ. ಅವನೇ ಬೇರೊಂದೆಡೆ 'ಅಹಂಕಾರದ ಪ್ರಬೋಧೆಗಳೇಕಯ್ಯ' ಎಂದು ಪ್ರಶ್ನಿಸಿದ್ದಾನೆ 'ನಾಹಂಕರ್ತಾ' ಎನ್ನಬೇಕು. 'ಅಹಂಕಾರ ರಹಿತವಾದಲ್ಲಿ ಸನ್ನಿಹಿತ ಕಾಣು ಕೂಡಲ ಸಂಗಮ ದೇವ' ಎಂದು ಬಸವಣ್ಣನವರು ಹೇಳಿದ್ದಾರೆ.

## ಕೋಪ

'ಕೋಪ ಅನರ್ಥಸಾಧನ' ಎಂಬುದು ಎಲ್ಲರಿಗೂ ತಿಳಿದ ವಿಷಯ. ಮನುಷ್ಯನು ಶುದ್ಧ ಜೀವಿಯಾಗಿ ಬಾಳಬೇಕಾದರೆ ಕಾಮಕ್ರೋಧಗಳನ್ನು ಬಿಡಬೇಕು. "ಕೋಪವೆಂಬುದು ಕೇಳಿ ಪಾಪದ ನೆಲೆಗಟ್ಟು ಕೂಪದೊಳು ನೇಣ ಹರಿದಂತೆ ನರಕದಿ ಕೋಪಿ ತಾನಿಳಿವ ಸರ್ವಜ್ಞ" "ಒಡಲೆಂಬ ಹುತ್ತಕೆ ನುಡಿವ ನಾಲಿಗೆ ಸರ್ಪ ಕಡುರೋಷವೆಂಬ ವಿಷವೇರಿ ಸಮತೆ ಗಾರುಡಿಗನಂತಕ್ಕು ಸರ್ವಜ್ಞ". ಕೋಪವಿರುವವನ ದೇಹ ಹುತ್ತದಂತೆ ಅವನಬಾಯಿ ವಿಷದ ಮಾತುಗಳನ್ನು ಕಕ್ಕುತ್ತದೆ ಇದರಿಂದ ಸಮಸ್ಥಿತಿ ದೂರ ಎನ್ನುತ್ತಾನೆ ಸರ್ವಜ್ಞ. ಕೋಪವೆಂಬುದು ಅಭಿಮಾನದ ಮೂಲ ಆತ್ಮಹಾನಿಯ ಆದಿ. ಕೊನೆಗೆ ಅದುವೇ ಹುಚ್ಚು ಕೋಪ ನೀತಿಗೆ ಕೊಡಲಿ ಇದ್ದಂತೆ ವ್ಯಕ್ತಿ ಇಂದ್ರಿಯ ವಿಷಯಗಳಲ್ಲಿ ಮನಸ್ಸು ಹಾಕಿದರೆ ಅವುಗಳಲ್ಲಿ ಆಸಕ್ತಿ. ಆಸಕ್ತಿಯಿಂದ ಆಸೆ, ಆಸೆಯಿಂದ ಕೋಪ, ಕೋಪದಿಂದ ಆತ್ಮದ ಕೇಡು, ಕೊನೆಗೆ ವಿಷಯಗಳಲ್ಲಿ ಚಿಂತಿಸುವ ಮಾನವರಿಗೆ ಅವುಗಳಲ್ಲಿ ಸಂಗವುಂಟಾಗುವುದು ಸಂಗದಿಂದ ಕಾಮ, ಕಾಮದಿಂದ ಕ್ರೋಧ, ಕ್ರೋಧದಿಂಡ ಸಂಮೋಹ, ಸಂಮೋಹದಿಂದ ಸ್ಮೃತಿ ವಿಭ್ರಮ. ಸ್ಮೃತಿ ವಿಭ್ರಮದಿಂದ ಬುದ್ಧಿನಾಶ, ಬುದ್ಧಿನಾಶದಿಂದ ಸರ್ವನಾಶವೆಂದು ಭಗವದ್ಗೀತೆ ಬೋಧಿಸುತ್ತದೆ ಹೀಗೆ ಒಂದು ದುರ್ಗುಣ ದುರ್ಗುಣಗಳ ದುಷ್ಟ ಸಂತಾನಕ್ಕೆ ಕಾರಕವಾಗಿ ಅಂತ್ಯದಲ್ಲಿ ಆತ್ಮದ ಅವನತಿಯಾಗುವುದು ಆದ್ದರಿಂದ ಕೋಪ ಹೊಲ್ಲದು ಸಲ್ಲದು ಬೇರೆಯವರು ನಮ್ಮ ಮೇಲೆ ಕೋಪಿಸಿಕೊಂಡರೆ ನಾವು ಪ್ರತಿಯಾಗಿ ಕೋಪಿಸಿಕೊಳ್ಳದೆ ಸಮಾಧಾನವಾಗಿರಬೇಕು. ಬದಲಾಗಿ ನಾವು ಕೋಪಿಸಿಕೊಂಡರೆ ಅದು ನಮ್ಮನ್ನು ಬೂದಿಮಾಡುತ್ತದೆ ಇದನ್ನು ಅಣ್ಣನವರು "ತನುವಿನ ಕೋಪ ತನ್ನ ಹಿರಿಯತನದ ಕೇಡು ಮನದ ಕೋಪ ತನ್ನ ಅರಿವಿನ ಕೇಡು ಮನೆಯೊಳಗಿನ ಕಿಚ್ಚು ಮನೆಯ ಸುಟ್ಟಲ್ಲದೆ ನೆರೆಮನೆ ಬೇವುದೇ ಕೂಡಲ ಸಂಗಮದೇವ" ಎಂದಿದ್ದಾರೆ. ಮನೆಯೊಳಗಣ ಬೆಂಕಿಯು ಮನೆಯನ್ನೇ ವ್ಯಾಪಿಸಿ ಸುಡುವಂತೆ ಕೋಪ ಯಾರ ತನುವಿನಲ್ಲಿ ಹುಟ್ಟುತ್ತದೋ ಅವರನ್ನೇ ಮೊದಲು ಸುಟ್ಟುಹಾಕುವುದು. ಆದ್ದರಿಂದಲೇ 'ತನಗೆ ಮುನಿವವರಿಗೆ ತಾ ಮುನಿಯಲೇಕಯ್ಯ' ಎನ್ನುವುದು ಅಣ್ಣವರ ಪ್ರಶ್ನೆ, ಬುದ್ಧಿಯಿಂದ ಅನ್ಯರು ಎಷ್ಟು ಹಿಂಸಿಸಿದರೂ ಶಾಂತಿ ಸಮಾಧಾನಗಳಿಂದ ಇದ್ದಷ್ಟೂ ನಮ್ಮ ಯೋಗ್ಯತೆ ಸದ್ಗುಣಗಳು ಬೆಳಕಿಗೆ ಬರುವುವು. "ಚಂದನವ ಕಡಿದು ಕೊರೆದು ತೇದಡೆ ನೊಂದೆನೆಂದು ಕಂಪ ಬಿಟ್ಟಿತ್ತೇ? ತಂದು ಕಬ್ಬುನವ ಕಡಿದೊರೆದಡೆ ಬೆಂದು ಪಾಕಾಗುಳ್ಳವಾಗಿ, ಸಕ್ಕರೆಯಾಗಿ ಸವಿಯ ಬಿಟ್ಟಿತ್ತೇ? ನಾ ಹಿಂಡಿ ಮಾಡಿದ ಹೀನಗಳೆಲ್ಲವ ತಂದು ಮುಂದಿಳುಹಲು ಹಾನಿಯೆ? ಚನ್ನಮಲ್ಲಿಕಾರ್ಜುನ ದೇವಯ್ಯ ಕೊಂದರೆ ಶರಣೆಂಬುದ ಮಾಣೆ" ಎಂದು ಅಕ್ಕಮಹಾದೇವಿ ಸೈರಣೆಯ ಮಹತ್ವವನ್ನು ದೃಷ್ಟಾಂತಗಳಿಂದ ದೃಢಪಡಿಸಿದ್ದಾಳೆ

## ಅಹಿಂಸೆ

ಅನ್ಯರನ್ನು ಮನೋವಾಕ್ ಕೃತಿಗಳಿಂದ ನೋಯಿಸದಿರುವುದು ಅಹಿಂಸೆ ಅನುಕಂಪ, ಅಹಿಂಸೆ ಉತ್ತಮರ ಲಕ್ಷಣಗಳು. ನಾವು ಮಾತನಾಡುವ ಮಾತಿನಲ್ಲಿ ನಯ ಮಾರ್ದವತೆ ಇರಬೇಕು ಅವಾಚ್ಯ, ಅಪ್ರಿಯಗಳ, ಬಿರುಸು ಮಾತುಗಳಿಂದ ದ್ವೇಷವುಂಟಾಗುವುದು ಪಾಪರಾಶಿ ಬೆಳೆಯುವುದು. ನಡೆ-ನುಡಿಯಿಂದ ಸ್ವರ್ಗ-ನರಕವೆಂದು "ಅಯ್ಯಾ ಎಂದಡೆ ಸ್ವರ್ಗ, ಎಲವೋ ಎಂದಡೆ ನರಕ ದೇವ ಭಕ್ತ, ಜೀಯಾ ಎಂಬ ನುಡಿಯೊಳಗೆ ಕೈಲಾಸವೈದುವುದು ಕೂಡಲ ಸಂಗಮದೇವ" ಎಂದು ಬಸವಣ್ಣನವರು ಸ್ಪಷ್ಟಪಡಿಸಿರುವರು. ಮಾತಿನಲ್ಲಿರಬೇಕಾದ ಮಾರ್ದವತೆ ಹೇಗೆಂಬುದನ್ನು "ಮೃದುವಚನವೇ ಸಕಲ ಜಪಂಗಳಯ್ಯ! ಮೃದುವಚನವೆ ಸಕಲತಪಂಗಳಯ್ಯ ವಿನಯವೇ ಸದಾಶಿವನ ಬಲುಮೆಯಯ್ಯ ಕೂಡಲ ಸಂಗಮ ದೇವ" ನಿರೂಪಿಸಿದ್ದಾರೆ ವಿನಯದ ಮಾತು ಬೇಕು. ಅದಕ್ಕಿಂತ ಬೇರೆ ಜಪತಪಗಳು ಇಲ್ಲ. ಒಳ್ಳೆಯದನ್ನು ನುಡಿಯಬೇಕು ನುಡಿದಂತೆ ನಡೆಯಬೇಕು ಈ ಸಾಮರಸ್ಯ ವಿರುವುದು ದಿಟವಾದ ನಡೆ-ನುಡಿ. ಇನ್ನೊಂದೆಡೆ ನುಡಿ ಹೇಗಿರಬೇಕೆಂಬುದನ್ನು ಅಣ್ಣನವರು "ನುಡಿದರೆ ಮುತ್ತಿನ ಹಾರದಂತಿರಬೇಕು ನುಡಿದರೆ ಮಾಣಿಕ್ಯದ ದೀಪ್ತಿಯಂತಿರಬೇಕು ನುಡಿದರೆ ಸ್ಫಟಿಕದ ಶಲಾಕೆಯಂತಿರ ಬೇಕು ನುಡಿದರೆ ಲಿಂಗ ಮೆಚ್ಚಿ ಅಹುದಹುದು ಎನಬೇಕು" ಎಂದು ತಿಳಿಸಿದ್ದಾರೆ ಷಣ್ಮುಖಸ್ವಾಮಿ ಕಟುನುಡಿಯುವವನಲ್ಲಿ ದೇವರು ಇರುವುದಿಲ್ಲವೆಂದು "ಕಲ್ಲು ಕಲ್ಲುತಾಗಿದಂತೆ ಸೊಲ್ಲು ಬಿರಿಯಾದರೆ ಅಲ್ಲಿ ನಿಲ್ಲನಯ್ಯಾ ಅಖಂಡೇಶ್ವರಾ" ಎಂದಿದ್ದಾನೆ. ಅಂತರಂಗ ಶುದ್ಧವಾಗಿ ಮೃದುವಾಗಿದ್ದರೆ ಮಾತು ಮೃದುವಾಗಿರುತ್ತದೆ. ಮನಸ್ಸಿನಲ್ಲಿ ಬೇರೆಯವರಿಗೆ ಕಿಡುಕನ್ನು ಬಗೆಯಬಾರದು ಅಳಿವುದು ಉಳಿವುದು ತನ್ನ ವಚನದಿಂದಲೇ ಎಂದು ವಚನಕಾರ ಸಿದ್ಧಲಿಂಗೇಶ್ವರ "ತನ್ನ ವಚನವೇ ತನಗೆ ಹಗೆಯಹುದಾಗಿ, ಅಳಿವುದು ಉಳಿವುದು ತನ್ನ ವಚನದಲ್ಲಿಯೇ ಅದೆ ಹಗೆಯೂ ಕಳೆಯೂ ತನ್ನ ವಚನವೇ, ಬೇರಿಲ್ಲ. ನಿಜಗುರು ಸ್ವತಂತ್ರ ಸಿದ್ಧಲಿಂಗೇಶ್ವರಾ" ಎಂದು ನುಡಿದಿರುವನು. ಅಂತರಂಗ-ಆತ್ಮಶುದ್ಧಿ ಇಲ್ಲದವರನ್ನು ದೇವರು ನಂಬುವುದಿಲ್ಲ. ಸಮಾಜದಲ್ಲಿ ಒಬ್ಬರ ಕಷ್ಟಸುಖಗಳಿಗೆ ಮತ್ತೊಬ್ಬರು ತೋರುವ ಅನುಕಂಪ, ಸಹಾನುಭೂತಿಗಳೇ ದಯೆ. ಮಾನವನಲ್ಲಷ್ಟೇ ಅಲ್ಲದೆ ಪ್ರಾಣಿಗಳಲ್ಲೂ ದಯೆ ತೋರುವುದು ಮುಖ್ಯ. ನಾವೆಲ್ಲರೂ ಒಬ್ಬ ಪರಮಾತ್ಮನಿಂದಲೇ ಬಂದಿರುವುದು ಎಂದು ತಿಳಿದರೆ ಮಾತ್ರ ಸರ್ವ

(24 ನೇ ಪುಟ ನೋಡಿ)

# ಶ್ರೀವೇಂಕಟೇಶ್ವರ ಡೈರಿ ಫಾರಂ

—ಶ್ರೀನಿವಾಸನ್

ತಿರುಮಲೆ ತಿರುಪತಿ ದೇವಸ್ಥಾನಗಳ ಯಾಜಮಾನ್ಯದಲ್ಲಿರುವ ಹಲವಾರು ಸಂಘ ಸಂಸ್ಥೆಗಳಲ್ಲಿ ಶ್ರೀವೇಂಕಟೇಶ್ವರ ಡೈರಿ ಫಾರಂ ಸಹ ಒಂದು. ಇಲ್ಲಿನ ವಿಶೇಷವೆಂದರೆ ಇದು ಪ್ರಮುಖವಾಗಿ ಹಾಗೂ ನೇರವಾಗಿ ಶ್ರೀವೇಂಕಟೇಶ್ವರಸ್ವಾಮಿಯ ಕೈಂಕರ್ಯದ ಉದ್ದೇಶ ಹೊಂದಿರುವಿಕೆ. ಪ್ರಾಣಿದಯಾ, ಪೋಷಣ ಅಂಶಗಳೂ ಸೇರಿವೆ ಎಂದರೆ ತಪ್ಪಿಲ್ಲ. ತಿರುಪತಿಯಿಂದ ಚಿತ್ತೂರಿಗೆ ಹೋಗುವ ಹಾದಿಯಲ್ಲಿ ಶ್ರೀ ವೆಂಕಟೇಶ್ವರ ವಿಶ್ವವಿದ್ಯಾಲಯದ ಎದುರಿಗೆ ಶ್ರೀಪದ್ಮಾವತಿ ಕಾಲೇಜಿನ ಹಿರಿಯ ಕಟ್ಟಡ ಕಾಣಸಿಗುತ್ತದೆ. ಅದರ ಪಕ್ಕದಲ್ಲಿ ಚಿತ್ತೂರು ರಸ್ತೆಯ ಬದಿಯಲ್ಲಿ ಉದ್ಯಾನ ವನದೋಪಾದಿಯಲ್ಲಿ ಕಂಗೊಳಿಸುವುದು ಶ್ರೀವೆಂಕಟೇಶ್ವರ ಡೈರಿ ಫಾರಂ.

ಸರಿಸುಮಾರು ಮುನ್ನೂರು ಎಕರೆಯಲ್ಲಿ ಹರಡಿರುವ ಶ್ರೀವೇಂಕಟೇಶ್ವರ ಡೈರಿ ಫಾರಂ ಹೆಚ್ಚು ಭಾಗದಲ್ಲಿ ಪರಿಪುಷ್ಟ ಹುಲ್ಲುಗಾವಲಿನಂತೆ ತೋರುವುದು. ಸುತ್ತ ಮುತ್ತಲ ಬಿಸಿಲ ಬೇಗೆಯ ನಡುವೆ ತಂಪಿನ ತಾಣವಾದ ಇಲ್ಲಿ ಆರು ನೂರು ಮಾವಿನ ಗಿಡಗಳ ಹದಿನೈದು ಎಕರೆಯ ವಿಸ್ತಾರವೂ ನಾನಾ ತೆರದ ಫಲಪುಷ್ಪಗಳ ಗಿಡ ಮರ ಬಳ್ಳಿಗಳೂ ಇವೆ ಭತ್ತದ ಗದ್ದೆಯೂ ಉಂಟು. ಸಣ್ಣ ಕೊಳವೂ ಪ್ರಾಣಿಗಳು ಆರಾಮವಾಗಿ ನಡೆದಾಡಲು ಅನುಕೂಲವಾದ ಸಮತಲವೂ ಉಂಟು.

ಐದು ಲಕ್ಷರೂಗಳ ವಾರ್ಷಿಕ ಅಂದಾಜು ವೆಚ್ಚದ ಈ ಡೈರಿಯಲ್ಲಿ ದಿನವೊಂದಕ್ಕೆ ಐದುನೂರು ಲೀಟರ್ ಹಾಲಿನ ಒಟ್ಟು ಉತ್ಪಾದನೆಯನ್ನು ನೀಡುವ ಸುಮಾರು ನಾಲ್ಕುನೂರು ದನಗಳಿವೆ. ಶ್ರೀವೇಂಕಟೇಶ್ವರ ಸ್ವಾಮಿಯ ಸೇವೆಯಲ್ಲಿ ಈ ಉತ್ಪಾದನೆಯ ಸಿಂಹಪಾಲು ಮೀಸಲು. ದಿನವೊಂದಕ್ಕೆ ಸುಮಾರು ಇನ್ನೂರ ಐವತ್ತು ಲೀಟರ್ ಹಾಲನ್ನೂ ವಾರವೊಂದಕ್ಕೆ ಆರು ಕಿಲೋ ಬೆಣ್ಣೆಯನ್ನೂ ತಿರುಮಲೆಯ ದೈವಕ್ಕೆ ಅರ್ಪಿಸಲಾಗುತ್ತದೆ. ಶ್ರೀನಿವಾಸ ಮಂಗಾಪುರ, ಅಲಮೇಲುಮಂಗಾಪುರ, ಗೋವಿಂದರಾಜ ಸ್ವಾಮಿ ದೇವಾಲಯ, ನಾಗಲಾಪುರ, ನಾರಾಯಣವನಗಳ ದೇವಾಲಯಗಳಿಗೂ ಆಗಾಗ ಹಾಲನ್ನು, ನೀಡುವುದುಂಟು. ಸುಮಾರು ನೂರು ಲೀಟರ್ ಹಾಲು ದಿನವೂ ತಿ ತಿ. ದೇ. ಶಿಕ್ಷಣ, ಧಾರ್ಮಿಕ ಸಂಸ್ಥೆಗಳಾದ ಶ್ರೀವೆಂಕಟೇಶ್ವರ ಬಾಲಮಂದಿರ, ಮೂಕಬಧಿರಾಂಧ ಶಾಲೆ, ಪ್ರಾಚ್ಯಕಲಾಶಾಲೆಯ ವಿದ್ಯಾರ್ಥಿ



ಮೈಸೂರು ಟರ್ಫ್ ಕ್ಲಬ್‌ನವರು ನೀಡಿದ ಕುದುರೆಗಳೊಡನೆ ವೈದ್ಯಾಧಿಕಾರಿ ಡಾ॥ ಪಿ. ಕೋದಂಡರೆಡ್ಡಿ

ತಾಯ ಮೊಲೆಯುಣ್ಣುವ ಕರುಗಳು



ಡೈರಿ ಫಾರಂನ ಗೋಸಂಪದವನ್ನು ವೃದ್ಧಿಗೊ



ಮಂದಿರ, ಅಕ್ಕಾರಾಂಪಲ್ಲಿಯ ಕುಷ್ಠರೋಗ ನಿವಾರಣಾಕೇಂದ್ರ, ತಿರುಮಲೆಯ ವೇದಪಾಠ ಶಾಲೆಗಳಿಗೆ ಸರಬರಾಜಾಗುತ್ತಿದೆ

ಶ್ರೀವೆಂಕಟೇಶ್ವರ ಸ್ವಾಮಿಯ ಸೇವೆಯ ಆನೆ, ಕುದುರೆಗಳು ಇಲ್ಲಿಯೇ ಪೋಷಣೆ ಪಡೆಯುತ್ತವೆ ಇದುವರೆಗೆ ತಿರುಮಲೆ-ತಿರುಪತಿ ದೇವಸ್ಥಾನಗಳ ಎಲ್ಲ ಆನೆಗಳೂ ಕರ್ನಾಟಕದಿಂದ ಬಂದದ್ದು ಸಧ್ಯಕ್ಕೆ ಸ್ವಾಮಿಯ ಸೇವೆಯಲ್ಲಿ ಆರು ಆನೆಗಳಿವೆ ಬಲದೇವ, ಜಾನಕಿ, ವಿಜಯಲಕ್ಷ್ಮಿ, ಪದ್ಮಾವತಿ, ರಾಜ, ರೇವತಿ ಆ ಆನೆಗಳ ಹೆಸರುಗಳು ರಾಜ ನನ್ನು 19-12-79 ರಂದು ಕರ್ನಾಟಕ ಸರ ಕಾರದ ವತಿಯಿಂದ ಪಡೆಯಲಾಯಿತು. ನಾಲ್ಕು ವರ್ಷದ ರೇವತಿಯನ್ನು ಕರ್ನಾಟಕದ ಪರವಾಗಿ ಕಳೆದವರ್ಷ ಏಪ್ರಿಲ್ ಮಾಹೆಯಲ್ಲಿ ಶ್ರೀಮತಿ ವರಲಕ್ಷ್ಮಿ ಗುಂಡೂರಾಯರು ನೀಡಿದರು ಬಲ ದೇವನೇ ಆನೆಗಳ ಈ ಸೈನ್ಯದಲ್ಲಿ ಹಿರಿಯ ಅವನ ವೃದ್ಧಾಪ್ಯದಿಂದಲೂ ಉದ್ಧಟತನದಿಂದಲೂ ಶ್ರೀ ವೆಂಕಟೇಶ್ವರ ಸ್ವಾಮಿಯ ಸೇವೆಯಿಂದ ಅವನನ್ನು ನಿವೃತ್ತಿಗೊಳಿಸಲಾಗಿದೆ. ಮಿಕ್ಕಂತೆ ಐವರೂ ಕಾಲಾನುಕ್ರಮವಾಗಿ ದೇವರ ಸೇವೆಯಲ್ಲಿ ಹಾಜ ರಾಗುತ್ತಾರೆ. ಉತ್ತಮ ಕ್ರಮಶಿಕ್ಷಣ, ಮಾವ ಟಿಗರ ಪ್ರಿಯವಾದ ಸಲುಗೆಯಿಂದ ಕೂಡಿದ ಪ್ರೇರಣೆ ಪ್ರಚೋದನೆ ಆಗಾಗ ಮಾಡುವ ವೈದ್ಯ ಕೀಯ ಪರಿಶೀಲನೆಗಳಿಂದಾಗಿ ಆನೆಗಳೆಲ್ಲ ಹೇಳಿ ದಂತೆ ನಡೆಯುತ್ತ ಅಂಕುಶವನ್ನು ದೂರಗೊಳಿಸಿವೆ ಎಂದರೆ ತಪ್ಪಾಗಲಾರದು.

ಶ್ರೀವೆಂಕಟೇಶ್ವರ ಸ್ವಾಮಿಯ ಸೇವೆಯಲ್ಲಿ ಕುದುರೆಗಳೂ ಉಂಟು. ಶ್ರೀವೆಂಕಟೇಶ್ವರಸ್ವಾಮಿ ಪದ್ಮಾವತಿಯನ್ನು ಕಂಡದ್ದೇ ಅಶ್ವಾರೋಹಿಯಾಗಿ ಬೇಟೆಗೆ ಹೋದಾಗ ಅಲ್ಲವೇ ? ತುರಗತತಿದಾನ ದಲ್ಲೂ ಕರ್ನಾಟಕ ಹಿಂದೆ ಬಿದ್ದಿಲ್ಲ. ಶ್ರೀವೆಂಕ ಟೇಶ್ವರ ಸ್ವಾಮಿಸೇವೆಗಾಗಿ ಬೆಂಗಳೂರಿನ ಟರ್ಫ್ ಕ್ಲಬ್‌ನವರು 1980 ರ ಜೂನ್ ತಿಂಗಳಿನಲ್ಲಿ ಎರಡು ಕುದುರೆಗಳನ್ನೂ ಅದಕ್ಕೂ ಹಿಂದೆ ಮೈಸೂರು ರೇಸ್ ಕ್ಲಬ್‌ನವರು ಮೂರು ಕುದುರೆ ಗಳನ್ನೂ ತಿರುಪತಿ ತಿರುಮಲೆ ದೇವಸ್ಥಾನಗಳಿಗೆ ನೀಡಿದ್ದಾರೆ

ಉತ್ಸವಗಳಲ್ಲಿನ ನಂದಿವಾಹನಕ್ಕಾಗಿ ಶ್ರೀ ವೆಂಕಟೇಶ್ವರ ಡೈರಿ ಫಾರಂ ನಾಲ್ಕು ಬಸವ ಗಳನ್ನು ಹೊಂದಿದೆ ಜೊತೆಗೇ ಶ್ರೀವೆಂಕಟೇಶ್ವರ ಸ್ವಾಮಿಯ ಸೇವೆಯಲ್ಲಿನ ಪುನುಗು ಸೇವೆಗಾಗಿ ಆರು ಪುನುಗುಬೆಕ್ಕುಗಳೂ ಇಲ್ಲಿಯೇ ಪೋಷಣೆ ಪಡೆಯುತ್ತಿವೆ.

ಹಸುಗಳನ್ನು ಹೆಚ್ಚು ದಷ್ಟಪುಷ್ಟವಾಗಿ ಹೆಚ್ಚು ಹಾಲುನೀಡುವಂತೆ ಬೆಳೆಸಲೆಂದು ಇಲ್ಲಿನ ಹುಲ್ಲಿನ ಬೆಳೆಯಲ್ಲಿ ಸಂಶೋಧನೆ ಹೊಸ ಹೊಸ ಕಸಿ ಮಾಡುವಿಕೆ ನಡೆಯುತ್ತಿದೆ 9 ಬಾವಿಗಳ ಈ ನೀರಾವರಿ ಭೂಮಿಯಲ್ಲಿನ ಭತ್ತದ ಬೆಳೆ ಶ್ರೀವೆಂಕಟೇಶ್ವರಸ್ವಾಮಿಗೆ ಮಾತ್ರ ಮೀಸಲು. ಆದರೂ ಆನೆಗಳಿಗಾಗಿ ಕಬ್ಬು, ಬೆಲ್ಲಗಳನ್ನೂ ಆಗಾಗ ಕೊಂಡು ನೀಡಲಾಗುತ್ತದೆ ಜಾನು ವಾರು ಅಭಿವೃದ್ಧಿಗಾಗಿ ಮೂರು ಗೂಳಿಗಳೂ ಇವೆ ಜೆರ್ಸಿ, ಸಿಂಧಿ, ಮಿಶ್ರತಳಿಯ ಈ ಗೂಳಿ ಗಳಿಂದಾಗಿ ನೈಸರ್ಗಿಕ ಕ್ರಮವನ್ನು ಮಾತ್ರ ಅನುಸರಿಸಿ ಜಾನುವಾರು ಅಭಿವೃದ್ಧಿಯನ್ನುಂಟು ಮಾಡುವುದು ಇಲ್ಲಿನ ಒಂದು ವಿಶೇಷ ಕೃತಕ ಬೀಜದಾನ ವಿಧಾನ ಇಲ್ಲಿ ಚಾಲ್ತಿಯಲ್ಲಿಲ್ಲ



"ಸಾಲಂಕೃತ ವಿಜಯಲಕ್ಷ್ಮಿ"

ನೈಸರ್ಗಿಕ ವಿಧಾನದಲ್ಲೇ ಉತ್ತಮ ತಳಿಗಳನ್ನು ಪಡೆಯಬಹುದೆಂಬುದು ಇಲ್ಲಿ ಸಾಧಿತವಾಗಿರುವ ಅಂಶವಾಗಿದೆ ಇಲ್ಲಿನ ಕರುಗಳ ಆರೋಗ್ಯ, ಪುಷ್ಟಿ ಗಳನ್ನು ಚಿತ್ರಗಳಲ್ಲೂ ಕಾಣಬಹುದಾಗಿದೆ.

(23ನೇ ಪುಟ ನೋಟ)

ಶ್ರೀಮತಿ ವರಲಕ್ಷ್ಮಿ ಗುಂಡೂರಾವ್ ಅವರಿಂದ ರೇವತಿಯನ್ನು ಸ್ವೀಕರಿಸುತ್ತಿರುವ ಶ್ರೀ ಪಿ ವಿ ಆರ್ ಕೆ. ಪ್ರಸಾದ್. ಚಿತ್ರದಲ್ಲಿ ಹಿಂದೂಧರ್ಮ ರಕ್ಷಣಸಂಸ್ಥೆಯ ಬೆಂಗಳೂರು ಶಾಖೆಯ ಅಧ್ಯಕ್ಷರು ಶ್ರೀ ವಿ. ಆರ್ ನಾಯುಡು ಹಾಗೂ ಡೈರಿಫಾರಂನ ಡಾ॥ ಈಶ್ವರರೆಡ್ಡಿ ಅವರನ್ನು ಕಾಣಬಹುದು



ಎರಡು (ಜೆರ್ಸಿ, ಸಿಂಧಿ) ಗೂಳಿಗಳು



# ಕಿಶೋರ ಜಗತ್



## ಗಂಗಾ ಸ್ನಾನ

ಮಧ್ವಯತಿವರೇಣ್ಯರಾದ ಶ್ರೀಪಾದ ರಾಜರ ಹೆಸರು ಹರಿದಾಸ ಸಾಹಿತ್ಯದಲ್ಲಿ ಎದ್ದು ಕಾಣುವ ಹೆಸರು. ಕನ್ನಡವನ್ನು ಕನ್ನಡಿಗರಿಗೇ ಕಲಿಸಿದ ಮಹಾನುಭಾವರು ಶ್ರೀಪಾದರಾಜರು. ದೇವಪೂಜಾಸಮಯ ದಲ್ಲಿ ಸಂಸ್ಕೃತವನ್ನು ಬಿಟ್ಟು ಪ್ರಾಕೃತ ಭಾಷೆಯಾಡಿದರೆ "ಮೈಲಿಗೆ" ಎಂದು ಮೂಗು ಮುರಿಯುತ್ತಿದ್ದ ಕಾಲದಲ್ಲಿ; ಕನ್ನಡದಲ್ಲೇ ಕೀರ್ತನೆಗಳನ್ನು ರಚಿಸಿ, ಪೂಜಾಕಾಲದಲ್ಲೇ ಹಾಡುವ ಸಂಪ್ರದಾಯ ವನ್ನು ತಂದ ಕಡುಗಲಿಗಳು ಶ್ರೀಪಾದ ರಾಜರು !

ಒಮ್ಮೆ ಶ್ರೀಪಾದರಾಜರು ಕಾಶೀಯಾತ್ರೆ ಯನ್ನು ಮಾಡಿಕೊಂಡು ತಮ್ಮ ಸ್ಥಳವಾದ ಮುಳಬಾಗಿಲಿಗೆ ಬಂದರು. ಮಧ್ವಮತ ವನ್ನು ಹೋದೆಡೆಯಲ್ಲೆಲ್ಲಾ ಸ್ಥಾಪಿಸಿ, ಹರಿಯೇ ಸರ್ವೋತ್ತಮನೆಂದು ಡಂಗುರ ಹೊಡೆಸಿ, ದಿಗ್ವಿಜಯ ಮಾಡಿಕೊಂಡು ಬಂದ ಸ್ವಾಮಿಗಳ ದರ್ಶನದಿಂದ ಮುಳ ಬಾಗಿಲಿನ ಶಿಷ್ಯವೃಂದ ಪುಳಕಿತಗೊಂಡಿತು: ನಮಸ್ಕರಿಸಿದ ಶಿಷ್ಯರನ್ನು ನಾರಾಯಣ ಸ್ಮರಣೆ ಮಾಡಿ ಆಶೀರ್ವದಿಸಿ ಸಾಮಿಗಳು "ಎಲ್ಲರೂ ಕ್ಷೇಮವಷ್ಟೇ" ಎಂದು ನುಡಿ ದರು.

ಶಿಷ್ಯರು : ಚರಣಾನುಗ್ರಹದಿಂದ ಕ್ಷೇಮ. ಆದರೆ ಕಾಶೀಯಾತ್ರೆಯ ಭಾಗ್ಯಮಾತ್ರ ನಮಗೆ ಲಭಿಸಲಿಲ್ಲ. ಗಂಗಾ ಸ್ನಾನವಾಗಲಿಲ್ಲ.

ಸ್ವಾಮಿಗಳು : ಅದಕ್ಕೇನಂತೆ, ಇನ್ನೊಮ್ಮೆ ಹೋದರಾಯಿತು.

ಶಿಷ್ಯರು : ಆ ಭಾಗ್ಯ ನಮಗಿಲ್ಲ. ತಮಗೆ ತಿಳಿಯದ ವಿಷಯವೇನಿಲ್ಲ.

ಶ್ರೀಪಾದರಾಜನಿಗೆ ತಮ್ಮ ಶಿಷ್ಯರ ಪರಿ ಸ್ಥಿತಿ ಅರ್ಥವಾಯಿತು. ಸ್ವಭಾವತಃ ಕಡುಕರುಣಾಳುಗಳಾದ ಸ್ವಾಮಿಗಳಿಗೆ ಅನು ಕಂಪ ಉಂಟಾಯಿತು. ಶಿಷ್ಯರನ್ನು ಕುರಿತು "ಚಿಂತೆ ಬಿಡಿ. ಗಂಗಾಸ್ನಾನಕ್ಕೆ ಕಾಶೀ ಯಾತ್ರೆ ಏಕೆ ? ನಾಳೆ ಬೆಳಗ್ಗೆ ಬನ್ನಿರಿ. ನೃಸಿಂಹತೀರ್ಥದಲ್ಲಿಯೇ ಗಂಗಾಸ್ನಾನ ವಾಗುವುದು" ಎಂದರು.

ಮರುದಿನ ಬೆಳಗ್ಗೆ ನೃಸಿಂಹತೀರ್ಥದ ಬಳಿ ಶಿಷ್ಯ ವೃಂದ ಕಿಕ್ಕಿರಿದು ನೆರೆಯಿತು. ಸ್ವಾಮಿಗಳು ಪ್ರಾತರ್ವಿಧಿಗಳನ್ನು ತೀರಿಸಿ ನೃಸಿಂಹತೀರ್ಥದ ಬಳಿ ಬಂದರು. ಎಲ್ಲ ರಿಗೂ ಕುತೂಹಲ, ಉತ್ಸಾಹ. ಏನೋ ಒಂದು ಬಗೆಯ ಸಂಭ್ರಮ, ಸಂಕುಚಿತ ಮನಸ್ಸಿನವರಿಗೆ ಒಂದು ತರಹದ ಸಂಶಯ; ಸ್ವಾಮಿಗಳು ಬಂದವರೇ ನೃಸಿಂಹ ತೀರ್ಥದ ಕಟ್ಟೆಯಮೇಲೆ ಕುಳಿತರು ಕಣ್ಣು ಮುಚ್ಚಿ ಧ್ಯಾನಾಸಕ್ತರಾದರು. ಮನದಲ್ಲೇ ಹರಿಯ ಪಾದದಿಂದ ಉದಿಸಿದ ಗಂಗೆಯನ್ನು ಪರಿ ಪರಿಯಾಗಿ ಸ್ತೋತ್ರ ಮಾಡತೊಡಗಿದರು.

ವಾತಾವರಣ ಶಾಂತವಾಗಿದೆ. ಎಲ್ಲರೂ ಏನಾಗುವುದೋ ಎಂದು ಆತುರದಿಂದ ನೋಡುತ್ತಿದ್ದಾರೆ.

ಸ್ವಲ್ಪ ಸಮಯವಾಯಿತು. ಸ್ವಾಮಿಗಳ ಭಕ್ತಿಯ ರಭಸಕ್ಕೆ ಗಂಗೆಗೆ ನಿಲ್ಲಲಾಗಲಿಲ್ಲ. ನೃಸಿಂಹತೀರ್ಥದ ಈಶಾನ್ಯದಿಕ್ಕಿನಿಂದ ಚಿಮ್ಮಿ, ಚಿಮ್ಮಿ ಬರತೊಡಗಿದಳು. ಶುದ್ಧ ಶ್ವೇತವರ್ಣದಿಂದ ಬುಳು ಬುಳು ಜಿನು ಗುತ್ತಿದ್ದ ನೀರಿನಿಂದ ನೃಸಿಂಹತೀರ್ಥ ತುಂಬಿ ತುಳುಕಿತು. ಜನಗಳು ಆಶ್ಚರ್ಯ ಭರಿತ ರಾಗಿ ಜಯಕಾರ ಮಾಡಿದರು.

ಸ್ವಾಮಿಗಳು ಶಿಷ್ಯರನ್ನು ಕುರಿತು "ಏಳಿರಿ, ನೃಸಿಂಹತೀರ್ಥದಲ್ಲಿ ಸ್ನಾನ ಮಾಡಿರಿ. ಕಾಶೀಯಾತ್ರೆಯ ಪುಣ್ಯವೂ ಸಿಗುವುದು. ಗಂಗಾಸ್ನಾನವೂ ಆಗುವುದು" ಎಂದರು.

ಶಿಷ್ಯರಿಗೆ ಇಷ್ಟೇ ಸಾಕಾಯಿತು. ನಾ ಮುಂದು, ತಾ ಮುಂದು ಎಂದು ಮುಂದೆ ಬಂದು ಸ್ನಾನ ಮಾಡಿದರು. ಕೃತಾರ್ಥ ರಾದರು.

'ಭಕ್ತಿಗೆ ಮಣಿಯದ ಶಕ್ತಿ ಯಾವುದು ?'

**— ಜಯಸಿಂಹ.**

ಹೊಲಬುಗೆಟ್ಟ ಶಿಶು ತನ್ನ ತಾಯ ಬಯಸುವಂತೆ,
ಬಳಿದಪ್ಪಿದ ಪಶು ತನ್ನ ಹಿಂಡನರಸುವಂತೆ,
ಬಯಸುತ್ತಿರ್ದೆನಯ್ಯಾ ನಿಮ್ಮ ಭಕ್ತರ ಬರವನು,
ದಿನಕರನುದಯಕ್ಕೆ ಕಮಳ ವಿಕಸಿತವಾದಂತೆ,
ಎನಗೆ ನಿಮ್ಮಶರಣರ ಬರವು, ಕೂಡಲಸಂಗಮದೇವಾ.

—ಬಸವಣ್ಣ

(21ನೇ ಪುಟದಿಂದ)

ಈ ಎಲ್ಲದರ ಮೇಲುವಿಚಾರಣೆ, ಅಭಿವೃದ್ಧಿಗಳಿಗಾಗಿ ಸೂಕ್ತ ಸಿಬ್ಬಂದಿಯೂ ಇದೆ ಈ ಸಿಬ್ಬಂದಿಗೂ ಶ್ರೀವೆಂಕಟೇಶ್ವರ ಡೈರಿ ಫಾರಂ ಅವರಣದಲ್ಲೇ ವಾಸಗೃಹಗಳನ್ನೊದಗಿಸಿರುವುದರಿಂದ ಯಾವುದೇ ತುರ್ತುಕರೆಯನ್ನೂ ಕೂಡಲೇ ಎದುರಿಸುವುದು ಸುಲಭವಾಗಿದೆ. ಆಂಧ್ರಪ್ರದೇಶದ ಜಾನುವಾರು ಅಭಿವೃದ್ಧಿ ಇಲಾಖೆಯಿಂದ ಬದಲಿಯಾಗಿ ಕೆಲಸ ಮಾಡುತ್ತಿರುವ ಜಾನುವಾರು ವಿಜ್ಞಾನದಲ್ಲಿ ಸ್ನಾತಕೋತ್ತರ ಪದವಿಪಡೆದ ಡಾ॥ ಈಶ್ವರರೆಡ್ಡಿಯವರು, ತಿ ತಿ. ದೇ ಗಳ ಡಾ॥ ಪಿ. ಕೋದಂಡರೆಡ್ಡಿ, ಹಾಗೂ ಕೃಷಿಅಧಿಕಾರಿ ಶ್ರೀ ಸಿ ನಾಥಮುನಿರೆಡ್ಡಿಯವರ ಸಂಘಟಿತ ನೇತೃತ್ವದಲ್ಲಿ ಜಾನುವಾರುಗಳು ಸುಖವಾಗಿ ಮೇಯುತ್ತ ವಿಶ್ರಾಂತಿ ಪಡೆಯುತ್ತ ದಷ್ಟ ಪುಷ್ಟವಾಗಿ ಬೆಳೆಯುತ್ತಿವೆ.

ಎಲ್ಲ ದನಗಳ ಹಟ್ಟಿಯಲ್ಲಿ ಆನೆ ಕುದುರೆಗಳ ಲಾಯದಲ್ಲಿ ಕಂಡುಬರುವ ಒಂದು ಅಂಶವೆಂದರೆ ಅಲ್ಲಿನ ಅಶುಚಿ. ಆ ಮೂಲಕವಾಗಿ ಹರಡಬಹುದಾದ ಅನಾರೋಗ್ಯ. ಆದರೆ ಶ್ರೀ ವೆಂಕಟೇಶ್ವರ ಡೈರಿ ಫಾರಂ ಈ ಒಂದು ನಿಯಮಕ್ಕೆ ಹೊರತು ಎನ್ನಬೇಕು. ಪ್ರತಿಯೊಂದು ಹಸುವನ್ನೂ ಪ್ರತ್ಯೇಕವಾಗಿ ಗುರುತಿಸಿ ಅದರದರ ನಿರ್ದಿಷ್ಟ ಗೊತ್ತಿಗೆ ಕಟ್ಟುವಿಕೆ, ಅಲ್ಲಿನ ಪುನಃ ಪುನಃ ಮಾಡುವ ಶುದ್ಧೀಕರಣ ಪ್ರಾಣಿಗಳ ದೈನಂದಿನ ನಡಾವಳಿಯಲ್ಲಿ ತುಸು ವ್ಯತ್ಯಾಸವಾದರೂ ಕೂಡಲೇ ವೈದ್ಯಕೀಯ ಪರಿಶೀಲನೆಗಳು, ಇದಕ್ಕೆ ಕಾರಣವೆನ್ನಬಹುದು. ಎಲ್ಲ ಹಿರಿಯ ಫಾರವ್ ಗಳಲ್ಲಿರುವಂತೆ ಯಾಂತ್ರಿಕವಾಗಿ ವಿದ್ಯುತ್ತಿನ ಸಹಾಯದಿಂದ ಹಾಲು ಕರೆಯುವ ರೂಢಿ ಇಲ್ಲಿಲ್ಲ. ಬದಲಾಗಿ ಪರಂಪರೆಯಿಂದ ಬಂದಂತೆ ಮಾನವೀಯ ಪ್ರೀತಿ ವಿಶ್ವಾಸಗಳಿಂದ ಹಸುಗಳನ್ನು ಅದರದೇ ಆದ ಮೂಕ ಭಾಷೆಯಲ್ಲಿ ಮಾತನಾಡಿಸುತ್ತ ಪರಿಶುದ್ಧವಾದ ಕೈಗಳಿಂದಲೇ ಹಾಲು ಕರೆಯಲಾಗುತ್ತದೆ. ಹೀಗಾಗಿ ಇಲ್ಲಿನ ಕೆಲಸಗಾರರಿಗೂ ಜಾನುವಾರುಗಳು ಹೊಂದಿಕೊಂಡಿವೆ. ಅನ್ಯೋನ್ಯ ಸಂಬಂಧದಲ್ಲಿ ಒಂದು ಸಾಮಾನ್ಯ ಗುರಿಗಾಗಿ ದುಡಿಯುವ ಎಂದರೆ ದೇವರ ಸೇವೆಯಲ್ಲಿ ದುಡಿಯುವ ಮನೋಭಾವ ಹರಡಿದೆ ಎಂದರೆ ಉತ್ಪ್ರೇಕ್ಷೆಯಲ್ಲ.

★

## ರಸ-ಪ್ರಶ್ನೆಗಳು ಉತ್ತರಗಳು

ಮಾತು-ಅರ್ಥ ಎರಡೂ ವ್ಯರ್ಥ ಯಾವಾಗ ?

ಸ್ವ-ಅರ್ಥವಿಲ್ಲದಾಗ

ಧರ್ಮ-ಎಂದರೆ ?

ಯದ್ಭೂತ ಹಿತಂ.

ವಿಶ್ವದಲ್ಲಿ ಮೂರು ಮಹಾಶಕ್ತಿಗಳು ಯಾವುವು ?

ವಿಚಾರ ಶಕ್ತಿ; ಕ್ರಿಯಾಶಕ್ತಿ; ಭಾವಶಕ್ತಿ.

ಕೆಲವರಲ್ಲಿ — 1) ವಿಚಾರ ಮುಂದು-ಕ್ರಿಯೆ-ಭಾವ ಹಿಂದು

2) ಕ್ರಿಯೆ ಮುಂದು-ವಿಚಾರ, ಭಾವ ಹಿಂದು

3) ಭಾವ ಮುಂದು-ವಿಚಾರ-ಕ್ರಿಯೆ ಹಿಂದು

ಇಂಥವರು ಯಾವ ವರ್ಗಕ್ಕೆ ಸೇರುತ್ತಾರೆ ?

1) ಜ್ಞಾನಿಗಳ ವರ್ಗ 2) ಕರ್ಮಿಗಳ ವರ್ಗ 3) ಭಕ್ತರ ವರ್ಗ.

ಪರಮಾತ್ಮನಿಗೆ 'ಲಿಂಗ' ರೂಪ ಏಕೆ ?

'ನಿರಾಕಾರ'ದ ಪ್ರತೀಕ

ವೇದಗಳಿಂದ ನಾಲ್ಕುಮಹಾವಾಕ್ಯಗಳನ್ನ ತಿಳಿಸಿ ?

1) ಋಗ್ವೇದ— 'ಪ್ರಜ್ಞಾನಂ ಬ್ರಹ್ಮ'

2) ಯಜುರ್‌ವೇದ— 'ಅಹಂ ಬ್ರಹ್ಮಾಸ್ಮಿ'

3) ಸಾಮ ವೇದ— 'ತತ್ ತ್ವಂ ಅಸಿ'

5) ಅಥರ್ವಣ ವೇದ— 'ಅಯಂ ಆತ್ಮ ಬ್ರಹ್ಮ'

—ಮುತ್ತೀಗೆರೆ ಅನಂತು

## ವೆಂಕಟೇಶನಲ್ಲಿ ಅರಿಕೆ

ಜಯದೇವ ಜಯದೇವ ಜಯವೆಂಕಟೇಶಾ
ಕೈಹಿಡಿದು ಕಾಪಾಡು ಸ್ವಾಮಿ
ಜಗದೀಶಾ | ಪ |

ಪದ್ಮಾವತಿಯೊಡ ಸೇರಿ
ನಸುನಗುತಲಿರುವೆ
ತಿರುಪತಿಯ ತುದಿಯಲ್ಲಿ
ಹಾಯಾಗಿ ಇರುವೆ | ಪ |

ಏಳುಕೊಪ್ಪರಿಗೆಯಲಿ
ಸಿರಿಹೊಂದಿದವನೆ
ಜಗಕೆಲ್ಲ ಸಿರಿವಂತ
ದೊರೆಯಾಗಿರುವನೆ | ಪ |

ದಯೆಯ ಹೃದಯದೆ ನೀನು
ಹೊತ್ತು ನಿಂತಿರುವೆ
ಜನರ ಕಷ್ಟವನೆಲ್ಲ
ದೂರ ಮಾಡಿರುವೆ | ಪ |

ನಿನ್ನಯ ಪಾದದಲೆನೆಗೆ
ಆಶ್ರಯವ ಕೊಡುದೇವಾ
ಭಕ್ತನಾಗುವ ಸದ್ಗತಿಯ
ನೀಡೆನೆಗೆ ದೇವಾ | ಪ |

ನನಗಿರುವ ದುಷ್ಟ ಟಿಗಳ
ಕೊಲ್ಲು ನೀ ಗುರುವೆ
ಕೈಮುಗಿದು ನಾ ಬೇಡುವೆ
ಓ ಎನ್ನ ಪ್ರಭುವೆ | ಪ |

**ಆರ್. ಕೆ. ಶಾನುಭೋಗ.**

(19 ನೇ ಪುಟದಿಂದ)

ಜೀವಿಗಳಲ್ಲಿ ಪ್ರೇಮ, ಆತ್ಮೀಯತೆಗಳನ್ನು ತೋರುವುದು ಸಾಧ್ಯ. ಆದ್ದರಿಂದ ಆತ್ಮಗಳಲ್ಲಿ ಏಕತ್ವವನ್ನು ಕಂಡುಕೊಳ್ಳಬೇಕು ಆಗ 'ಅಹಿಂಸಾ ಪರಮೋ ಧರ್ಮಃ' ಎನ್ನುವುದನ್ನು ಪಾಲಿಸುವುದು ಸಾಧ್ಯ. ಜೀವಹಿಂಸೆಮಾಡುವುದು ಪಾಪನಿಷಿದ್ಧ. ಜೀವಹಿಂಸೆ ಮಾಡುವವನು ಎಲ್ಲರಿಗಿಂತ ಕೀಳು. ಅದಕ್ಕಾಗಿ 'ಅಳು ಕಂಡ್ಯಾ ಹೋತೆ?" ಎಂದು ಬಸವಣ್ಣನವರು ಮರುಗಿದ್ದಾರೆ "ಜಾಲಗಾರನೊಬ್ಬ ಜಲವ ಹೊಕ್ಕು ಶೋಧಿಸಿ ಹಲವು ಪ್ರಾಣಿಗಳ ಕೊಂದು ನಲಿನಲಿದಾಡುವ ತನ್ನ ಮನೆಯಲೊಂದು ಶಿಶು ಸತ್ತರೆ ಅದಕೆ ಮರುಗುವಂತೆ ಅವಕೇಕೆ ಮರುಗನು ?" ಕೊಲ್ಲುವವನೇ ಮಾದಿಗನೆಂದು ಅಕ್ಕಮಹಾದೇವಿ ಬಲವಾಗಿ ಹಿಂಸಾಚಾರವನ್ನು ಖಂಡಿಸಿದ್ದಾಳೆ. "ಇರಿವುದು ಕಡಿವುದು ಮಲ ದೇಹಿಗಳಿಗಲ್ಲದೆ ನಿರ್ಮಲ ದೇಹಿಗಳಿಗುಂಟೆ," ಎನ್ನುತ್ತಾನೆ ಘಟ್ಟಿವಾಳಯ್ಯ. ಸರ್ವಪ್ರಾಣಿಗಳಲ್ಲಿ ದಯೆ ಬೇಕು. ಯಾವುದೇ ಧರ್ಮಕ್ಕಾದರೂ ದಯೆ ಬೇಕೇ ಬೇಕು. ದಯೆಯ ತಳಹದಿ ಇಲ್ಲದ್ದು ದಿಟವಾದ ಧರ್ಮ ಅಲ್ಲವೇ ಅಲ್ಲ. ಪ್ರಾಪಂಚಿಕ ಧರ್ಮಕ್ಕಂತೂ ದಯೆಯೇ ಅಡಿಪಾಯ. ಆದ್ದರಿಂದ ಸಕಲ ಜೀವಿಗಳಲ್ಲೂ ದಯೆ ತೋರಬೇಕೆಂದು "ದಯವಿಲ್ಲದ ಧರ್ಮವದೇವುದಯ್ಯಾ ದಯವೇ ಬೇಕು ಸರ್ವಪ್ರಾಣಿಗಳೆಲ್ಲರಲಿ. ದಯವೇ ಧರ್ಮದ ಮೂಲವಯ್ಯ" ಎಂದು ನಿಶ್ಚಿತ ನಿಲುವನ್ನು ವ್ಯಕ್ತಪಡಿಸಿದ್ದಾಳೆ ಅಕ್ಕಮಹಾದೇವಿ. ಇದು ದಯೆಯ ಮಾನದಂಡವೂ ಕೂಡಾ. ತನ್ನಂತೆ ಪರರನ್ನು ಕಾಣುವುದು ಅಹಿಂಸೆ.

## ಇಂದ್ರಿಯನಿಗ್ರಹ

ಇಂದ್ರಿಯಗಳು ಸದಾ ವಿಷಯ ಸುಖಗಳನ್ನು ಅರಸುತ್ತವೆ ಎಂದೇ ಇಂದ್ರಿಯಗಳು ಮನುಷ್ಯನ ಎಲ್ಲ ದುಷ್ಟ ಪ್ರವೃತ್ತಿಗಳಿಗೆ ಬೀಜ. ಕಾರಣ ಮನಸ್ಸಿನಲ್ಲಿ ಮಾಡುವ ಪ್ರೇರಣೆಗಳು ಕುಟಿಲ ತಂತ್ರಗಳು ಉಳ್ಳವು ಆದ್ದರಿಂದ ಇಂದ್ರಿಯ ನಿಗ್ರಹ ನೀತಿಯ ಮಾರ್ಗಕ್ಕೆ ಸುಲಭ ಸೋಪಾನ. ಮನಸ್ಸನ್ನು ಅಂತರಂಗದ ಆತ್ಮಧ್ಯಾನದಲ್ಲಿರಿಸುವನು ಜ್ಞಾನಿ. ಇದರಿಂದ ನಿಜವಾದ ಶಾಂತಿ ಮತ್ತು ಶ್ರೇಷ್ಠ ಗತಿ ದೊರೆಯುವುದು. ಆದ್ದರಿಂದ ಹತ್ತು ಕಡೆ ಅಲೆದಾಡುವ ಮನಸ್ಸನ್ನು ಹಿಡಿದು ಭಗವಂತನ ಕಡೆಗೆ ಹರಿಸಬೇಕು. "ಸಕಲೇಂದ್ರಿಯಗಳಲ್ಲಿ ವಿಹರಿಸುವ ಮನವ ಸೆಳೆದು ನಿಂದಾತನೇ ಸುಖಿ ಪಂಚೇಂದ್ರಿಯಗಳಚ್ಛೆಯಲ್ಲಿ ಕೀಳು ಮನಂಗೊಂಡು ಸುಳಿವಾತ ದುಃಖಿ ಮನಸ್ಸು ಬಹಿರ್ಮುಖವಾಗಲು ಮಾಯಾ ಪ್ರಪಂಚ ಮನವಂತರ' ಮುಖವಾಗಲು ಅವಿರಳಜ್ಞಾನಿ. ಮನವು ಮಹದಲ್ಲಿ ಮುಕ್ತನು. ಮನೋಲಯವಾದರೆ ಸೌರಾಷ್ಟ್ರ ಸೋಮೇಶ್ವರ ಲಿಂಗದಲ್ಲಿ ಅಬೇದ್ಯನು" ಎಂದು ಆದಯ್ಯ ಮನೋವಿಕಾರ, ನಿರ್ವಿಕಾರಗಳ ಸ್ವರೂಪವನ್ನು ಸುಂದರವಾಗಿ ಚಿತ್ರಿಸಿರುವನು. ಇಂದ್ರಿಯ ನಿಗ್ರಹದಲ್ಲಿ ಬ್ರಹ್ಮಚರ್ಯ ಅಡಗಿದೆ. ಪರಸ್ತ್ರೀಯರನ್ನು ಮಾತೆಯಂತೆ ಕಾಣಬೇಕು 'ಛಲಬೇಕು ಶರಣಂಗೆ ಪರಸತಿಯನೊಲ್ಲೆನೆಂಬ' 'ಎಲ್ಲಿ ನೋಡಿದರಲ್ಲಿ ಮನವೆಳಸಿದರೆ ಆಣೆ ನಿಮ್ಮಾಣೆ, ನಿಮ್ಮ ಪ್ರಮಥರಾಣೆ' 'ಪರವಧುವನು ಮಹಾದೇವಿಯೆಂದೇ ಕಾಬೆ' 'ಅನ್ಯವಧುವೆಂಬುದು ನಿಮ್ಮರಾಣಿವಾಸ' ಎಂದು ಅಣ್ಣನವರೂ "ಗಂಡನುಳ್ಳಮ್ಮನ ಕಂಡು ಗೌರಿಯೆಂದು ಕಂಡಡೆ ಭೂಮಂಡಲಕೆ ಅರಸನಾಗಿ ಹುಟ್ಟುವನು ಗಂಡನುಳ್ಳಮ್ಮನ ಕಂಡು ಒಡವೆರೆದರೆ ನರಕದಲಿ ದಿಂಡುಗೆಡದಿಪ್ಪನೈ ರಾಮನಾಥ" ಎಂದು ದೇವರ ದಾಸಿಮಯ್ಯನೂ ಬೋಧಿಸಿರುವರು.

ಸ್ತೇಯ ಎಂದರೆ ಕಳ್ಳತರ ಮಾಡುವುದು. ಅಸ್ತೇಯ ಎಂದರೆ ಕಳ್ಳತನ ಮಾಡದಿರುವುದು ಪ್ರತ್ಯಕ್ಷವಾಗಲಿ ಅಥವ ಅಪ್ರತ್ಯಕ್ಷವಾಗಲಿ ಬೇರೆಯವರ ವಸ್ತುಗಳನ್ನು ಅವರಿಗೆ ತಿಳಿಯದಂತೆ ತೆಗೆದುಕೊಳ್ಳದಿರುವುದು ಅಸ್ತೇಯವೆನಿಸುತ್ತದೆ. 'ಪರಸ್ತ್ರೀ ಪರಧನವೆಂಬೀ ಜೂಬಿಂಗಂಜುವೆ' ಎಂದಿದ್ದಾರೆ ಅಣ್ಣನವರು ಒಂದು ವಚನದಲ್ಲಿ. ಅಸ್ತೇಯ ರೂಢಿಯಲ್ಲಿ ಬರಲು ವಚನಕಾರರು ಕಾಯಕತತ್ತ್ವವನ್ನು ಕಂಡು ಹಿಡಿದರು. ಪ್ರತಿಯೊಬ್ಬರು ದುಡಿದು ಸಂಪಾದಿಸಿ ಮಿಕ್ಕದ್ದನ್ನು ಇತರರಿಗೆ ಉಪಯೋಗಿಸಬೇಕೆಂದರು ಸಂಗ್ರಹ ಬುದ್ಧಿಯನ್ನು ಕಟುವಾಗಿ ಖಂಡಿಸಿದರು. ಆಯ್ದಕ್ಕಿ ಮಾರಯ್ಯ ಅಕ್ಕಿಯನ್ನು ಹೆಚ್ಚಿಗೆ ಆರಿಸಿ ಕೊಂಡು ಬಂದಾಗ ಅವನ ಹೆಂಡತಿ ಪತಿಯ ದುರಾಸೆಯನ್ನು ನೋಡಿ 'ಈಸಕ್ಕಿಯ ಆಸೆ ನಿಮಗೇಕೆ' ಎಂದು ಹೆಚ್ಚಿನ ಅಕ್ಕಿಯನ್ನು ಅಚೆ ಕಳುಹಿಸಿದಳು. ಪರತಂತ್ರರಾಗದೆ ಉದ್ಯೋಗ ಮಾಡಿ ಜೀವಿಸ ಬೇಕೆಂಬುದೇ ಅಸ್ತೇಯದ ಧ್ಯೇಯ,

ಇಲ್ಲಿಯವರೆಗೆ ಕಂಡು ವಿಷಯಗಳೆಲ್ಲವನ್ನು ಬಸವಣ್ಣನವರು "ಕಳಬೇಡ ಕೊಲ ಬೇಡ ಹುಸಿಯ ನುಡಿಯಲು ಬೇಡ ಮುನಿಯ ಬೇಡ ಅನ್ಯರಿಗೆ ಅಸಹ್ಯ ಪಡಬೇಡ ತನ್ನ ಬಣ್ಣಿಸ ಬೇಡ ಇದಿರು ಹಳಿಯಲು ಬೇಡ ಇದೇ ಅಂತ ರಂಗ ಶುದ್ಧಿ ಇದೇ ಬಹಿರಂಗ ಶುದ್ಧಿ ಇದೇ ನಮ್ಮ ಕೂಡಲಸಂಗನನೊಲಿಸುವಪರಿ" ಎಂದು ಈ ವಚನದಲ್ಲಿ ಮೂಲೆಯಾಗಿ ಕೋದಿದ್ದಾರೆ. ಕಾಮ, ಕ್ರೋಧ ಲೋಭ, ಮದ, ಮತ್ಸರ ಅಮಿಷಗಳಿಂದ ತುಂಬಿ ಮನುಷ್ಯ ಸಪ್ತವ್ಯಸನಿಯಾಗಿದ್ದಾನೆ ಇವುಗಳಿಂದ ಬಿಡುಗಡೆಯಾಗದೆ ಹೋದರೆ ಜನನ–ಮರಣಗಳ 'ಚಕ್ರಾರ ಪಂಕ್ತಿ' ಯಿಂದ ಪಾರಾಗಲು ಸಾಧ್ಯವಿಲ್ಲ. 'ಕಾಮ ಒಂದನೆಯ ಭವಿ ಕ್ರೋಧ ಎರಡನೆಯ ಭವಿ ಲೋಭ ತೃತೀಯ ಭವಿ ಮೋಹ ಚತುರ್ಥ ಭವಿ ಮದ ಪಂಚಮ ಭವಿ ಮತ್ಸರ ಷಷ್ಠಮ ಭವಿ, ಅಮಿಷ ಸಪ್ತಮ ಭವಿ' ಎಂದು 'ಕಾಮದ ಒಡಲನ್ನು ಕ್ರೋಧದ ಗೊತ್ತು ಲೋಭದ ಇಕ್ಕೆ, ಮೋಹದ ಮಂದಿರ ಮದದಾವರಣ, ಮತ್ಸರ ಹೊದಿಕೆಯನ್ನು ಕಿತ್ತೊಗೆದಲ್ಲದೆ ಪರಮಾರ್ಥ ಸಾಧನೆ ಸಾಧ್ಯವಿಲ್ಲ'ವೆಂದಿದ್ದಾರೆ. "ಅಹಂಕಾರಂ ಬಲಂ ದರ್ಪಂ ಕಾಮಕ್ರೋಧಂ ಪರಿಗ್ರಹಂ ವಿಹಾಯ ನಿರ್ಮಮ ಶಾಂತೋ ಬ್ರಹ್ಮಭೂಯಾಯ ಕಲ್ಪತೇ' ಅಂದರೆ ಅಹಂಕಾರ ಕೋಪ ದರ್ಪ ಮೊದಲಾದುವನ್ನು ಕಿತ್ತೊಗೆದು ನಮ್ರನೂ ಶಾಂತನೂ ಆದವನು ಬ್ರಹ್ಮನಾಗಲು ಯೋಗ್ಯನೆಂದಿದೆ ಗೀತೆ. ಅಂತೆಯೇ ವ್ಯಕ್ತಿ ಶೀಲ ಸತ್ಕ್ರಿಯೆ ಸದಾಚಾರ ಮೊದಲಾದ ಸದ್ಗುಣಗಳಿಂದ ಆತ್ಮಕಲ್ಯಾಣವನ್ನು ಸಾಧಿಸಲು ಬೇಕಾದ ಸಕಲ ಪರಿಕರಗಳೂ ಇಲ್ಲಿವೆ. ವ್ಯಕ್ತಿಯ ಹಾಗೂ ಸಮಾಜದ ಕ್ಷೇಮಕ್ಕೆ ವಚನಗಳು ನುಡಿದ-ನಡೆದ ರೀತಿ-ನೀತಿಗಳು ಅಗತ್ಯವಾಗಿವೆ. ವಚನ ಪಠಣ ಮನುಷ್ಯ ಮಣ್ಣಿನ ಮೇಲೆ ಹುಟ್ಟಿದಮೇಲೆ ಇಹ ಪರಗಳಲ್ಲಿ ಆನಂದ ಅನುಭವಿಸಲು ಸಾಧನವಾಗಿವೆ. ಜೀವನ ವಿಚಾರದಲ್ಲಿ ಆತ್ಮೋದ್ಧಾರದ ವಿಚಾರದಲ್ಲಿ ವಚನಗಳು ಉನ್ನತ ಪಥವನ್ನು ದಿಗ್ದರ್ಶಿಸುತ್ತಿವೆ. ಸದಾ "ಸರ್ವಜೀವಂಗಳಲ್ಲಿ ಹಿಂಸೆಯ ಮಾಡದಿಪ್ಪುದೇ ಪ್ರಥಮ ಪುಷ್ಪ ಸರ್ವೇಂದ್ರಿಯಂಗಳಂ ನಿಗ್ರಹಿಸಿ ಕೊಂಡಿರಬಲ್ಲಡೆ ದ್ವಿತೀಯಪುಷ್ಪ...ಸರ್ವಾಹಂಕಾರವಳಿದು ಶಾಂತವಾಗಿರಬಲ್ಲಡೆ ಚತುರ್ಥ ಪುಷ್ಪ ದುರ್ಭಾವ ಪ್ರಕೃತಿಯುಳಿದ ಸದ್ಭಾವ ಎಡೆಗೊಂಡಿರಬಲ್ಲಡೆ ಪಂಚಮ ಪುಷ್ಪ ಅನೃತ ಮರೆತು ಸತ್ಯವನುಡಿಯಬಲ್ಲಡೆ ಸಪ್ತಮ ಪುಷ್ಪ" ಎನ್ನುವ ವಚನವಾಣಿ ನಮ್ಮ ಪೂಜೆಯಾಗಿ, ಹೃದಯಗಹ್ವರದಲ್ಲಿ ಮಾರ್ದನಿಸುತ್ತಾ, ದಾರಿ ದೀಪವಾಗಿರಲಿ.

★

( 14ನೇ ಪುಟದಿಂದ )

ಹ್ಯಾಂಗ ನಿಂತಾರೆ ನಗಪೇಳಿರೇ''

ಜನಪದ ಗೀತೆಗಳಲ್ಲಿ ನಮಗೆ ಅನೇಕ ಮುಗ್ಧ ಭಾವನೆಗಳು ಕಂಡು ಬರುತ್ತವೆ. ಜನಪದರು ವಿದ್ವಾಂಸರಲ್ಲದಿದ್ದರೂ ಸ್ವಚ್ಛವಾದ ನಿಸರ್ಗ ಕಾವ್ಯ ವನ್ನು ಬರೆಯ ಬಲ್ಲರು. ಕಾವ್ಯ ತಂಪನೆಯ ಬೆಳ್ದಿಂ ಗಳಿನಂತಹದು ಪ್ರಾತಃಕಾಲದ ಅರುಣರೇಖೆ ಯಂತಹದು ಕೃಷ್ಣನಿಗಾಗಿ ಹುಡುಕಿದಳೊಬ್ಬ ಭಕ್ತೆ ಹಾಗೆಯೇ ಪ್ರತಿದಿನ ಹುಡುಕುತ್ತಲೇ ಇದ್ದಳು. ಆಕೆಯ ಹೃದಯದಲ್ಲಿ ನಿರಾಸೆ ತುಂಬಿತು

"ಕೃಷ್ಣ ಕೃಷ್ಣ ಎಂದು ಮತ್ತೆ ಬೀದಿಗೆ ಬಂದೆ
ಕೃಷ್ಣ ನಮಗೆಲ್ಲಿ ದೊರೆತಾನ ಈ ಪರಿ
ಎಷ್ಟುದಿನ ಹೀಂಗ ಕಳೆಯಲೆ"

ಎಂದು ಅವಳ ನಿರಾಸೆ ಗೀತೆಯಾಗಿ ಹೊಮ್ಮಿತು.

ರಾಮನಿಗಿಂತ ಹನುಮಂತನ ಮೇಲೆ ಸ್ತುತಿ ಪದಗಳು ಹೆಚ್ಚಿರ ಬಹುದು. ಹನುಮಂತ ಜನಪ ದರ ಪೀಡೆಗಳನ್ನೆಲ್ಲಾ ಕಳೆಯುವ ದೇವರು. ಹನು ಮಂತ ರಾಮನಿಗಿಂತ ದೊಡ್ಡವನಂತೆ. ಆತನೆ ಸೀತಮ್ಮನನು ಸೆರೆ ಯಿಂದ ಬಿಡಿಸಿದನಂತೆ.

"ಸೀತಮ್ನ ಒಯ್ಯಾಗ, ಶ್ರೀರಾಮ ಸಣ್ಣವ
ಆಗ ಹನುಮಂತ ಹೊಸಮಗ ತಾ ಕೂತೂ
ಸೀತಾನ ಸೆರೆಯ ಬಿಡಿಸ್ಯಾನ"

ಮೇಲೆ ಹೇಳಿದ ಶೈವ ಮತ್ತು ವೈಷ್ಣವ ಗೀತೆಗ ಳಲ್ಲದೆ ಬೇರೆ ದೇವತೆಗಳಿಗೆ ಸಂಬಂಧಿಸಿದ ಸ್ತುತಿ ಗಳೂ ಜನಪದ ಗೀತೆಗಳಲ್ಲಿ ಕಂಡು ಬರುತ್ತವೆ ಗರತಿಯ ಹಾಡುಗಳಲ್ಲಿ ಸರಸ್ವತಿಯಸ್ತುತಿ ಒಂದು ವಾಗ್ದೇವಿಯನ್ನು ಕೇವಲ ಒಂದು ದೇವತೆಯಂತಲ್ಲದೆ ಅಕ್ಕನಂತೆ, ತಾಯಿಯಯಂತೆ ಭಾವಿಸಿ ಜನಪದರು ಪ್ರಾರ್ಥಿಸುವರು. ಸರಸ್ವತಿಗೆ ಲಂಚವಾಗಿ ಬಾಳೆಯ ಹಣ್ಣನ್ನು ಕೊಡುವರು.

"ಅಕ್ಕ ಸರಸೋತಿ ಆದಿ ಬ್ರಹ್ಮನ ಮಡದಿ
ಬಾಳೇಯ ಹಣ್ಣು ಒಳಲಂಚ ಹೊರಲಂಚ
ಬಾಗೂರು ಬೆನವ ಕೊಡು ಮತಿಯ"

ಕನ್ನಡದ ಸ್ತುತಿ ಪದಗಳಲ್ಲಿ ಕಂಡುಬರುವ ಒಂದು ವಿಶಿಷ್ಟ ಸ್ತುತಿ ಜವರಾಯನದು. ಈತ ನನ್ನು ಸ್ತುತಿಸುವ ಕೆಲವು ಜನಪದ ಗೀತೆಗಳು ಬೀಸುವ ಕಲ್ಲಿನ ಹಾಡುಗಳಲ್ಲಿವೆ

## ಕರ್ಮಮಾರ್ಗ :

ಕರ್ಮಮಾರ್ಗಕ್ಕೆ ಸಂಬಂಧಿಸಿದ ವ್ರತಗಳು, ನೋಂಪಿಗಳು, ಜಾತ್ರೆಗಳು ಕನ್ನಡ ದೇಶದ ಎಲ್ಲ ಕಡೆಗಳಲ್ಲೂ ಕಂಡುಬರುತ್ತವೆ. ಕರ್ಮಗಳು ನಿತ್ಯ ನೈಮಿತ್ತಿಕ, ಕಾಮ್ಯ ಮತ್ತು ನಿಷಿದ್ಧಗಳೆಂದು ನಾಲ್ಕು ತೆರನಾಗಿರುತ್ತವೆ. ವೇದಾಂತಿಗಳು ಕರ್ಮಮಾರ್ಗವನ್ನು ತಿರಸ್ಕಾರ ಭಾವದಿಂದ ನೋಡಿದರೂ ವೇದಾದಿಗಳೆಲ್ಲಾ ವಿವಿಧ ಕರ್ಮಗಳಿಗೆ ತಕ್ಕಮಟ್ಟಿನ ಪ್ರಾಧಾನ್ಯವನ್ನು ಕೊಟ್ಟವು. ಯಜುರ್ವೇದ ಯಜ್ಞಾದಿ ಕರ್ಮಗಳ ಬಗೆಗೆ ಹೇಳು ತ್ತದೆ ಆದರೆ ಯಜ್ಞಯಾಗಾದಿಗಳು ಸಾಮಾನ್ಯ ಜನರಿಗೆ ಎಟುಕುವಂತಹವಲ್ಲ. ಎಲ್ಲರಿಗೂ ಹಿಡಿಸುವ ಕರ್ಮಕಾಂಡಗಳೆಂದರೆ ವ್ರತ, ನೋಂಪಿ, ಜಾತ್ರೆ ಮುಂತಾದುವು. ಇವುಗಳಿಗೆ ಸಂಬಂಧಿಸಿದ ಅನೇಕ ನಂಬಿಕೆಗಳು ಇಂದಿಗೂ ಬೇರೂರಿವೆ. ವ್ರತಾದಿ ಗಳು ಹೆಂಗಸರಿಗೆ ಸಂಬಂಧಿಸಿದವು, ಕೆಲವು ಪೂಜೆ ಗಳು ಗಂಡಸರಿಗೆ ಮೀಸಲಾದವು

ಮನುಷ್ಯನ ಜೀವನದಲ್ಲಿ ಅತ್ಯಂತ ಪ್ರಾಚೀನ ಕಾಲದಿಂದ ಆಚರಣೆಗಳಿಗೆ ಹೆಚ್ಚು ಪ್ರಾಧಾನ್ಯ ಕಂಡುಬರುತ್ತದೆ. ಗುಹಾಂತರವಾಸಿಯಾಗಿದ್ದ ಮಾನವನ ಜೀವನ ಅತಿಮಾನುಷಶಕ್ತಿಗಳೊಂದಿಗೆ ಬೆರೆತಿತ್ತು. ಮನುಷ್ಯ ತನ್ನ ಸುಖದುಃಖಗಳನ್ನು ಅತಿ ಮಾನುಷ ಶಕ್ತಿಗಳ ಮುಂದೆ ವ್ಯಕ್ತಗೊಳಿ ಸುತ್ತಿದ್ದ. ಆ ಶಕ್ತಿಗಳ ಪ್ರೀತಿಗಾಗಿ ಸಾಮೂಹಿಕ ವಾಗಿ ಕರ್ಮ ಕಾಂಡಗಳನ್ನಾಚರಿಸುತ್ತಿದ್ದನು

ಕನ್ನಡ ನಾಡಿನಲ್ಲಿ ಆಚರಣೆಗಳು ಇಂದಿಗೂ ಅನೇಕ ಪೂಜೆಗಳು, ಹೆಂಗಸರ ವ್ರತಾದಿಗಳು, ಹಳ್ಳಿಗಳಲ್ಲಿ ಸಾಮೂಹಿಕವಾಗಿ ನಡೆಯುವ ಜಾತ್ರೆ ಗಳು ಹಾಡುಗಳಿಂದ ಕೂಡಿರುತ್ತವೆ.

ಮಳೆಗಾಲದಲ್ಲಿ ಭೂಮಿತಾಯಿಗೆ ಪೂಜೆ ಮಾಡುತ್ತಾರೆ. ಉತ್ತರ ಕರ್ಣಾಟಕದಲ್ಲಿ ಜ್ಯೇಷ್ಠ ಬಹುಳ ಅಮಾವಾಸ್ಯೆಯನ್ನು ಮಣ್ಣೆತ್ತಿನ ಅಮಾ ವಾಸ್ಯೆ ಎನ್ನುತ್ತಾರೆ. ಮಣ್ಣಿನಿಂದ ಬಸವಣ್ಣ ನನ್ನು ಮಾಡಿ ಆರಾಧಿಸುವುದು ಸಂಪ್ರದಾಯ ಇದೇ ಸಂದರ್ಭದಲ್ಲಿ ಹಾಡುಗಳನ್ನೂ ಹೇಳುತ್ತಾರೆ ನಾಗಪೂಜೆ ಕನ್ನಡಿಗರಿಗೂ ಮುಖ್ಯವಾದುದೇ ಇದು ಭಾರತದ ಬೇರೆ ಪ್ರಾಂತ್ಯಗಳಲ್ಲೂ ಆಚರಿ ಸಲ್ಪಡುತ್ತದೆ.

"ಅಳ್ಳಿಟ್ಟು, ತಂಬಿಟ್ಟು, ಮಾಡಿಟ್ಟೆ ಎಳ್ಳುಂಡಿ
ದಳ್ಳುರಿ ಕಣ ಹಣಿಯುವನ ಕೊರಳಾನ
ನಾಗ ನಿನಗೆಡೆಯೊ ಕೈ ಮುಗಿದೊ"

ಮುಂತಾದುವು ನಾಗನನ್ನು ಕುರಿತ ಹಾಡುಗಳು.

ಉತ್ತರ ಕರ್ಣಾಟಕದಲ್ಲೇ ಜೋಕುಮಾರನ ಸಂಪ್ರದಾಯವೊಂದಿದೆ. ಭಾದ್ರಪದ ಶುದ್ಧ ಅಷ್ಟಮಿಯಂದು ಜೋಕುಮಾರನು ಅವತರಿಸಿದ ನೆನ್ನುತ್ತಾರೆ. ಇದು ದೈತ್ಯಂಗೆ ಸಂಬಂಧಿಸಿದ ಪೂಜೆ. ಜೋಕುಮಾರನನ್ನು ಹೊತ್ತುಕೊಂಡು ಹೆಂಗಸರು ಹಾಡುತ್ತಾ ಊರಿನಲ್ಲಿ ತಿರುಗಾಡು ತ್ತಾರೆ. ಉತ್ತರ ಕರ್ಣಾಟಕದಲ್ಲೇ ಕಂಡು ಬರುವ ಮತ್ತೊಂದು ಸಂಪ್ರದಾಯ 'ಗುರ್ಜಿ'. ಇದು ಬೇರೆ ಸ್ಥಳಗಳಲ್ಲಿ ಕಾಣುವ 'ಕರಗ' ಸಂಪ್ರ ದಾಯವನ್ನು ಹೋಲುತ್ತದೆ

"ಗುರ್ಜಿ ಗುರ್ಜಿ ಎಲ್ಯಾಡಿ ಬಂದೆ
ಹಳ್ಳಾ ಕೊಳ್ಳಾ ತಿರುಗಾಡಿ ಬಂದೆ
ಕಾರಮಳಿಯೇ ಕಪ್ಪತ ಮಳಿಯೇ
ಸುರಿಮಳಿಯೇ ಸುರಿಮಳಿಯೇ"

ಎಂದು ಮಳೆಯನ್ನು ಬಯಸಿ ಭಾದ್ರಪದ ಮತ್ತು ಆಶ್ವಯುಜ ಮಾಸಗಳಲ್ಲಿ ಹಾಡುವ ಸಂಪ್ರದಾಯ ವಿದು.

ಗೌರಿ ಪೂಜೆ, ವರಲಕ್ಷ್ಮೀ ಪೂಜೆ ಮುಂತಾ ದುವು ಕನ್ನಡನಾಡಿನ ಹೆಣ್ಣುಮಕ್ಕಳಿಗೆ ಪ್ರೀತಿಪಾತ್ರ ವಾದುವು ಶ್ರಾವಣ ಶುಕ್ರವಾರ ವ್ರತ, ಶ್ರಾವಣ ಸಂಪತ್ ಶನಿವಾರ ವ್ರತ ಮುಂತಾದುವು ಸಾಂಪ್ರ ದಾಯಿಕವಾಗಿ ನಡೆದುಬರುತ್ತಿರುವ ಕರ್ಮಾಚರಣೆ ಗಳು ಶ್ರಾವಣ ಮಹಾಲಕ್ಷ್ಮಿ ಕಣ್ಣು ತೆರೆದು ನೋಡಿದರೆ ಸಕಲ ಪಾಪಗಳೂ ನಾಶವಾಗುತ್ತ ವೆಂದು, ವಂಧ್ಯಾಸ್ತ್ರೀಗೆ ಮಕ್ಕಳಾಗುವರೆಂದೂ, ಕುರುಡರಿಗೂ ಕಣ್ಣು ಬರುತ್ತದೆಂದೂ ನಂಬುವರು

ಕ್ಷುದ್ರದೇವತೆಗಳನ್ನು ಪೂಜಿಸುವ ಸಂಪ್ರದಾಯ ಕನ್ನಡ ಜನಪದರು ಎಲ್ಲವ್ವ, ಕಾಳವ್ವ, ಸೋರವ್ವ, ಸತ್ಯವ್ವ, ಸೆಟ್ಟವ್ವ, ದ್ಯಾಮವ್ವ, ಜಕ್ಕವ್ವ, ದುರುಗವ್ವ, ಕರಿಯವ್ವ ಮುಂತಾದವರನ್ನು ಪೂಜಿ ಸುತ್ತಾರೆ. ಭರಮಪ್ಪ, ಏಳುಮಕ್ಕಳ ತಾಯಿ, ಬ್ರಹ್ಮರಾಕ್ಷಸ ಮುಂತಾದವರನ್ನು ಭಯ–ಭಕ್ತಿ ಗಳಿಂದ ಒಲಿಸಿಕೊಳ್ಳಲು ಜನಪದರು ಯತ್ನಿಸು ವರು. ಎಲ್ಲಮ್ಮನ ಮೇಲೆ ಕನ್ನಡದಲ್ಲಿ ಅಸಂಖ್ಯಾತ ಗೀತೆಗಳಿರುತ್ತವೆ. ಎಲ್ಲಮ್ಮ ಬೆಳಗಾಂ ಜಿಲ್ಲೆಯ ಸವದತ್ತಿಯಲ್ಲಿ ನೆಲೆಸಿರುವ ದೇವತೆ ಬೇರೆಡೆ ಗಳಲ್ಲೂ ಎಲ್ಲಮ್ಮನ ಸಂಪ್ರದಾಯ ಇದ್ದರೂ ಸವದತ್ತಿಯ ಎಲ್ಲಮ್ಮನ ಬೆಟ್ಟಕ್ಕೆ ಪ್ರತ್ಯೇಕತೆ ಇದೆ. ಪ್ರತಿ ವರ್ಷ ಅಲ್ಲಿ ನಡೆಯುವ ಜಾತ್ರೆಯ ಸಮಯ ದಲ್ಲಿ ಸುಮಾರು ಎರಡು ಲಕ್ಷ ಜನ ಬರುತ್ತಾರೆ. ಅಲ್ಲಿಯ ದೇವತೆಗೆ ಏಳುಕೊಳ್ಳದ ಎಲ್ಲಮ್ಮನೆಂದು ಹೆಸರು ಮಹಾ ವಿಷ್ಣುವಿನ ಆರನೆಯ ಅವತಾರ ವಾದ ಪರಶುರಾಮನ ತಾಯಿ ರೇಣುಕೆ. ಈಕೆಯ ಅಂಶದಲ್ಲಿ ಜನಿಸಿದವಳೇ ಎಲ್ಲಮ್ಮ. ಎಲ್ಲಮ್ಮನಿಗೆ ನಡೆಯುವ ಜಾತ್ರೆಯಲ್ಲಿ ಅನೇಕ ಸ್ತುತಿ ಗೀತೆಗ ಳನ್ನು, ಕಥನ ಗೀತೆಗಳನ್ನು ಹಾಡುವರು

"ಏಳು ಕೊಳ್ಳದಲ್ಲಿರುವ ಎಲ್ಲಮ್ಮನ
ಜಾತ್ರೆಯ ಮಾಡುವ ಬಾ

# ಗ್ರಂಥ ಪ್ರಕಾಶನ ಸಹಾಯಧನ

ತಿ.ತಿ. ದೇವಸ್ಥಾನಗಳು ಹಿಂದೂ ಧಾರ್ಮಿಕ ಸಾಹಿತ್ಯ ಪ್ರಸಾರ ಯೋಜನೆಯಲ್ಲಿ ಲೇಖಕರಿಗೆ ಸಹಾಯಧನ ನೀಡಿ ಅವರ ಪುಸ್ತಕಗಳ ಪ್ರಕಟನೆಯಲ್ಲಿ ನೆರವು ನೀಡುತ್ತಿರುವುದು ಸಪ್ತಗಿರಿಯ ಪಾಠಕರಿಗೆ ತಿಳಿದ ಅಂಶವೇ ಆಗಿದೆ. 1980–81 ರ ಅವಧಿಯಲ್ಲಿ ಈ ರೀತಿ ಸಹಾಯಧನ ಪಡೆದು ಅಚ್ಚಿನ ಮನೆಗೆ ಹೊರಟಿರುವ ಹಲವು ಪುಸ್ತಕಗಳು ಇಲ್ಲಿವೆ. ಪ್ರಕಟವಾದಂತೆಲ್ಲಾ ಅವುಗಳು ದೊರಕುವ ವಿಳಾಸ, ಬೆಲೆ ಮೊದಲಾದ ವಿವರಗಳನ್ನು ಸಪ್ತಗಿರಿಯ ಓದುಗರ ಅನುಕೂಲಕ್ಕಾಗಿ ಪ್ರಕಟಿಸಲಾಗುವುದು.

| ಪುಸ್ತಕದ ಹೆಸರು | ಭಾಷೆ |
|---|---|
| ಬ್ರಹ್ಮಸೂತ್ರಭಾಷ್ಯ ಸಂಪುಟ 3, 4, * | ಕನ್ನಡ |
| ಶ್ರೀಮದ್ಭಾಗವತ | ಕನ್ನಡ |
| ಗೀತಾವಲೋಕನ | ಕನ್ನಡ |
| ಶ್ರೀಮತ್ ಭಾಗವತ (7ನೇಸ್ಕಂಧ)* | ಕನ್ನಡ |
| ಭೈರವಪುರಾಣಂ | ಕನ್ನಡ |
| ಹರಿಭಜನಪದ್ಧತಿ | ಕನ್ನಡ |
| ವೇಮನ ವೇದಾಂತಸಿದ್ಧಾಂತ | ಕನ್ನಡ |
| ಹರಿಭಜನಾಮೃತಸಾರ | ಕನ್ನಡ |
| ಥಾಟ್ ಆಫ್ ಅಮ್ಮಿಸೆನ್ಸ್ | ಆಂಗ್ಲ |
| ರುದ್ರನಮಕಮ್ | ಆಂಗ್ಲ |
| ವಾಲ್ಮೀಕಿ ರಾಮಾಯಣ–ಅಯೋಧ್ಯಾ ಕಾಂಡ | ಆಂಗ್ಲ |
| ಮಹಾಭಾರತ ಅಂಡ್ ವೇರಿಯೇಷನ್ಸ್ | ಆಂಗ್ಲ |
| ಶ್ರೀರಾಘವೇಂದ್ರ ಲೈಫ್ ಅಂಡ್ ಹಿಸ್ ವರ್ಕ್ಸ್ | ಆಂಗ್ಲ |
| ತಿರುವಾಯ್ಮೊಳಿ | ಆಂಗ್ಲ |

| ಪುಸ್ತಕದ ಹೆಸರು | ಭಾಷೆ |
|---|---|
| ಸ್ತೋತ್ರರತ್ನಂ | ಆಂಗ್ಲ |
| ಕ್ರೈಸ್ಟ್ ಎಟರ್ನಲ್ | ಆಂಗ್ಲ |
| ಹಿಸ್ಟರಿ ಆಫ್ ತಿರುಮಲ ತಿರುಪತಿ ಟೆಂಪಲ್ ಆಫ್ ಶ್ರೀವೆಂಕಟೇಶ್ವರ | ಆಂಗ್ಲ |
| ಸೀಕ್ರೆಟ್ ತಪಸ್ | ಆಂಗ್ಲ |
| ಹಟರತ್ನಾವಳಿ | ಆಂಗ್ಲ |
| ದ್ವೈತ ಸಿದ್ಧಾಂತ ಸಾರ | ಆಂಗ್ಲ |
| ಅರಣ್ಯಕಾಂಡ ಅಂಡ್ ಕಿಷ್ಕಿಂಧಾಕಾಂಡ | ಆಂಗ್ಲ |
| ರಾಮದಾಸ್ ಆಫ್ ಭದ್ರಾಚಲಂ * | ಆಂಗ್ಲ |
| ಶ್ರೀವೇದಾಂತ ದೇಶಿಕ ದಯಾಶತಕಂ | ಆಂಗ್ಲ |
| ಲೇಪಾಕ್ಷಿ ಟೆಂಪಲ್ | ಆಂಗ್ಲ |
| ಸಹಸ್ರ ಮಂತ್ರಸಾರ ಸಂಗ್ರಹ ಸಂ॥ 1,2, | ಸಂಸ್ಕೃತ |
| ವಾಗ್ವಜ್ರ * | ಸಂಸ್ಕೃತ |
| ಪೋತನ ಕೆ ಕರ್ಮ ಔರ್ ಭಕ್ತಿತತ್ತ್ವ | ಹಿಂದಿ |

* ಈ ಪುಸ್ತಕಗಳು ಪ್ರಕಟವಾಗಿವೆ.

ಸತ್ಯುಳ್ಳ ಸತ್ಯನ್ನ ಪಾದವ
ಪೂಜೆಯ ಮಾಡುವ ಬಾ
ಉಘೋ ಉಘೋ ಉಘೋ ಎನ್ನುತ ಹಾಡನು
ಹಾಡುವ ಬಾ''

ಎಲ್ಲಮ್ಮನಂತೆ ಜಾತ್ರೆಗಳಲ್ಲಿ ಪೂಜೆಯನ್ನು ಪಡೆಯುವ ಇನ್ನೊಬ್ಬ ದೇವತೆ ಕೆಂಪಮ್ಮ. ತುಮಕೂರು ಜಿಲ್ಲೆಯ ಶೆಟ್ಟಿಕೆರೆಯ ಗ್ರಾಮದೇವತೆ ಕೆಂಪಮ್ಮ. ಯುಗಾದಿಯ ನಂತರ ಶುಕ್ರವಾರ ದಂದು ಇನ್ನು ಹದಿನೈದು ದಿನಗಳಲ್ಲಿ ಕೆಂಪಮ್ಮನ ಬಾನ (ಭೋಜನ>ಬೋನ>ಬಾನ) ನಡೆಯುವು ದೆಂದು ಹನ್ನೊಂದು ಹಳ್ಳಿಗಳಲ್ಲಿ ಪ್ರಕಟಿಸುತ್ತಾರೆ. ಕೆಂಪಮ್ಮನ ಜಾತ್ರೆಯ ಸಂದರ್ಭದಲ್ಲೂ ಅನೇಕ ಗೀತೆಗಳನ್ನು ಹೇಳುವುದುಂಟು.

## ಜ್ಞಾನಮಾರ್ಗ :

ಪರಮಾರ್ಥವನ್ನು ಪಡೆಯಲು ಎಲ್ಲ ಮಾರ್ಗ ಗಳಿಗಿಂತ ಇದು ಉತ್ತಮವಾದುದೆಂದು ವೇದಾಂತಿ ಗಳೆನ್ನುತ್ತಾರೆ. ಮೋಕ್ಷ ಸಾಧನವಾದ ಜ್ಞಾನ ಮಾರ್ಗವನ್ನೇ ಸಾಮಾನ್ಯ ವ್ಯವಹಾರದಲ್ಲಿ ವೇದಾಂತವೆನ್ನುವರು. ಈ ಜಗತ್ತು ಏಕೆ ಉಗಮ ಗೊಂಡಿತು. ಈ ಪ್ರಪಂಚಕ್ಕೂ ನನಗೂ ಇರುವ ಸಂಬಂಧವೇನು ಮುಂತಾದುವುಗಳ ಬಗೆಗಿನ ಚಿಂತನೆಯೇ ವೇದಾಂತ.

ಜನಪದರಿಗೆ ಉಪನಿಷತ್ತುಗಳು, ದರ್ಶನಗಳು, ತಾತ್ವಿಕ ಶ್ಲೋಕಗಳು ಗೊತ್ತಿಲ್ಲ. ಆದರೆ ಅವರಿಗೂ ಅವರದೇ ಆದ ವೇದಾಂತವೊಂದಿದೆ. ಜನಪದ ತತ್ವ ಪದಗಳಲ್ಲಿ ಹೆಚ್ಚಾಗಿ ಅದ್ವೈತ ಕಂಡು ಬರುತ್ತದೆ. ಇನ್ನೂ ರಾಜಯೋಗ, ಅಚಲ ವೇದಾಂತ, ಗುರುಭಕ್ತಿ, ಅಹಿಂಸೆ ಮುಂತಾದುವು ಪ್ರತಿಪಾದಿಸಲ್ಪಟ್ಟಿರುತ್ತವೆ. ವೀರಬ್ರಹ್ಮಂ, ಪರಶು ರಾಮ ಪಂತುಲ ಲಿಂಗಮೂರ್ತಿ, ರಾಮದಾಸ ಮುಂತಾದವರು ಹಾಡಿದ ತತ್ವಗಳು ಆಂಧ್ರದಲ್ಲಿ ಪ್ರಚಾರವಾಗಿರುವಂತೆ ಕನ್ನಡನಾಡಿನಲ್ಲೂ ಕೆಲವು ಪ್ರಸಿದ್ಧ ದಾರ್ಶನಿಕರು ಬರೆದ ತತ್ವಗಳೂ ಜನಪದ ರಲ್ಲಿ ಪ್ರಚಾರಗೊಂಡಿವೆ. ಅಲ್ಲಮ ಪ್ರಭು, ಅಕ್ಕ ಮಹಾದೇವಿ ಮುಂತಾದವರು ವೇದಾಂತ ಮಾರ್ಗಕ್ಕೂ ಪ್ರಾಧಾನ್ಯವನ್ನು ಕೊಟ್ಟು, ಕೆಲವು ಗೀತೆಗಳನ್ನು ರಚಿಸಿದ್ದಾರೆ. ಕಾಲಜ್ಞಾನ ತತ್ವ ಗಳಿಗೂ ಕನ್ನಡ ನಾಡಿನಲ್ಲಿ ಜನಪ್ರಿಯತೆ ಲಭಿಸಿದೆ.

ಕೆಳಗಿನ ರಾಜಯೋಗ ತತ್ವದಲ್ಲಿ ರಾಜ ಯೋಗವೆಂಬ ಮಾತಿಗೆ ಅರ್ಥವನ್ನು ತಿಳಿದುಕೊಳ್ಳ ಬೇಕೆಂದೂ, ನರಜನ್ಮವನ್ನು ಪಡೆದ ಮೇಲೆ ಮೋಕ್ಷ ಮಾರ್ಗವನ್ನು ಅನ್ವೇಷಿಸಬೇಕೆಂದೂ ಹೇಳ ಲಾಗಿದೆ.

"ರಾಜಯೋಗದ ಮಾತಿನ ಅರ್ಥ ತಿಳಿಯ
ಬೇಕು
ನರಜನ್ಮದಲ್ಲಿ ಹುಟ್ಟಿದ ಮೇಲೆ
ಮೋಕ್ಷಮಾರ್ಗದಲ್ಲಿಂಬೇಕು
ತಾಯಿತಂದೆ ಹೊಟ್ಟೆಯಲ್ಲಿ ಹುಟ್ಟಿ ಅವರ
ಪಾದಪೂಜೆ ಮಾಡಲೆ ಬೇಕು
ಗುರು ಹಿರಿಯರನ್ನ ಕಂಡರೆ
ಭಕ್ತಿಮಾರ್ಗದೊಳಿರಬೇಕು''

ಕೆಲವು ತತ್ವದ ಪದಗಳಲ್ಲಿ ರೂಪಕವನ್ನಾಶ್ರ ಯಿಸಿ ವೇದಾಂತವನ್ನು ಪ್ರತಿಪಾದಿಸುವುದು ಕಂಡು ಬರುತ್ತದೆ. ಮೊಸರು ಕಡೆಯುವುದು, ಹತ್ತಿ ಬಿರಿ ಯುವುದು ಮುಂತಾದ ಕೆಲಸ ಕಾರ್ಯಗಳನ್ನ ವೇದಾಂತ ಮಾರ್ಗದೊಂದಿಗೆ ಹೋಲಿಸಿ ಹೇಳು ವುದು ಕೆಲವು ತತ್ವಗಳಲ್ಲಿ ಕಂಡು ಬರುತ್ತದೆ. ಕೆಳ ಗಿನ ತತ್ವದಲ್ಲಿ 'ಜ್ಞಾನದ ಅಡಿಗೆಯನ್ನು ಮಾಡ ಬೇಕೆಂದು' ಜನಪದ ವೇದಾಂತಿ ಹೇಳುತ್ತಿದ್ದಾನೆ.

"ಅಡಿಗೆಯ ಮಾಡ ಬೇಕಣ್ಣಾ
ನಾವೀಗ ಜ್ಞಾನದ ಅಡಿಗೆಯ ಮಾಡ
ಬೇಕಣ್ಣಾ ॥ಪ॥
ಅಡಿಗೆಯನು ಮಾಡಬೇಕು ಮಥಿಸ ಬೇಕು
ಮದಗಳನ್ನ
ಒಡೆಯನಾಜ್ಞೆಯಿಂದ ಒಳ್ಳೇ ಸಡಗರದ
ಮುಕ್ತಿ ಅದಕೆ ॥
ಮನೆಯ ಸಾರಿಸಿ ಮಡಗ ಬೇಕಣ್ಣಾ
ಆ ಬಳಿಕ ತನ್ನಾಘನದಿ ಗರುವನ್ನು ನೆನೆಯ
ಬೇಕಣ್ಣಾ
ಕನಸುಯೆಂಬುವ ಕಲ್ಮಷಂಗಳ ಒನಕೆಯಿಂದ
ಕುಟ್ಟಿಕೇರಿ
ತನಗೆ ತಾನೆ ಆದ ಕರ್ಚನು
ಅಚ್ಚಿ ಅಡಿಗೆಯ ಮಾಡ ಬೇಕಣ್ಣಾ
ತತ್ವ ಭಾಂಡವ ತೊಳೆಯ ಬೇಕಣ್ಣಾ
ಸತ್ಯಾತ್ಮನಾಗಿ ಆರಿಸಿ ಅಕ್ಕಿಯ ಮಥಿಸ
ಬೇಕಣ್ಣಾ''

ಕನ್ನಡದಲ್ಲಿ ಅಸಂಖ್ಯಾತವಾಗಿ ಕಾಲಜ್ಞಾನ ತತ್ವ ಗಳಿವೆ. ರುದ್ರಮುನಿಸ್ವಾಮಿ ನೀಲಮ್ಮ ಮುಂತಾದ ವರ ಹೆಸರಿನಲ್ಲಿ ಅನೇಕ ತತ್ವಗಳು ಲಭಿಸುತ್ತವೆ.

"ಮುಂದಿನ ಸೂಚನೆ ಚೆನ್ನಾಗಿ ಹೇಳುವೆ
ಕೇಳಿರಣ್ಣಾ
ಭೂಮಿಯ ಮೇಲಣ ವೃಕ್ಷಗಳೆಲ್ಲವು ಮುರಿ
ದಾವು ನೋಡಿರಣ್ಣಾ
ಸೀಮೆಗಳೆಲ್ಲವು ಹಾಳಾಗಿ ಹೋದವು ಕೇಳಿ
ರಣ್ಣಾ
ಲೋಕಕ್ಕೆ ಮೀರಿದ ಚೋರರು ಬರುತಾರೆ ಕೇಳಿ
ರಣ್ಣಾ
ಮರಾಟ ನಡಿಯಾದು ಹೋರಾಟವಾದೀತು
ನೋಡಿರಣ್ಣಾ''

ಮುಂತಾದ ತತ್ವಗಳಲ್ಲಿ ಮುಂದೆ ಏನು ನಡೆಯು ತ್ತದೆಂಬುದನ್ನು ಹೇಳಲಾಗಿದೆ. ಆಸೆಯ ಹೊಟ್ಟೆ ಯಲ್ಲಿ ಸಿಂಹ ಹುಟ್ಟುವುದೆಂದು, ಮನುಷ್ಯನ ಹೊಟ್ಟೆಯಲ್ಲಿ ಹಾವುಗಳು ಹುಟ್ಟುತ್ತವೆಂದೂ. ಏಳುವರ್ಷದ ಹುಡುಗಿಗೆ ಗರ್ಭವಾಗುವುದೆಂದೂ ಹೇಳುವ ಕಾಲಜ್ಞಾನಗಳಿವೆ.

ಮೇಲೆ ವಿವರಿಸಿದಂತೆ ಕನ್ನಡ ಜನಪದ ಪರ ಮಾರ್ಥಗೀತೆಗಳಲ್ಲಿ ಭಕ್ತಿ–ಕರ್ಮ ಮತ್ತು ಜ್ಞಾನ ಮಾರ್ಗಗಳು ಪ್ರತಿ ಪಾದಿಸಲ್ಪಟ್ಟಿವೆ. ಜನಪದರು ಸ್ತುತಿ ಮಾಡಲಿ, ವ್ರತಗಳನ್ನಾಚರಿಸಲಿ, ವೇದಾಂತವನ್ನು ಹೇಳಲಿ–ಒಟ್ಟಿನಲ್ಲಿ ಅತಾರ್ಕಿಕ ಶಕ್ತಿಗಳಲ್ಲಿ ಅವರಿಗಿರುವ ನಂಬಿಕೆ ಪ್ರತಿಬಿಂಬಿತವಾ ಗುತ್ತದೆ. ಪರಮಾರ್ಥ ಪ್ರಾಪ್ತಿಗೆ ಅವರು ಅನುಸ ರಿಸುವ ಮಾರ್ಗಗಳು ಈ ಗೀತೆಗಳಲ್ಲಿ ವ್ಯಕ್ತ ವಾಗುತ್ತವೆ

*

# ವಾರ್ತಾ ಚಿತ್ರಗಳು




ಈಚೆಗೆ ತಿರುಪತಿಯಲ್ಲಿ ನಡೆದ ಗೀತಾಜ್ಞಾನ ಯಜ್ಞದಲ್ಲಿ ಗೀತೆಯ ಬಗ್ಗೆ ಮಾತನಾಡುತ್ತಿರುವ ಸ್ವಾಮಿ ಶ್ರೀ ಚಿನ್ಮಯಾನಂದಜಿ. ಚಿತ್ರದಲ್ಲಿ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ ಆರ್. ಕೆ. ಪ್ರಸಾದ್, ಉಪಕಾರ್ಯನಿರ್ವಹಣಾಧಿಕಾರಿ ಶ್ರೀ ಜಿ. ಟಿ. ನಾಯುಡು ಮತ್ತಿತರರನ್ನೂ ಕಾಣಬಹುದು.

---

ಗೀತಾ ಪಠನ ಸ್ಪರ್ಧೆಯಲ್ಲಿ ಪ್ರಥಮ ಬಹುಮಾನ ಪಡೆದ ಚಿ॥ ಎ. ಎಸ್. ಎಂ. ಆರ್. ಶೇಷಗಿರಿ ರಾವ್ ಚಿತ್ರದಲ್ಲಿ ಶ್ರೀ ಶ್ರೀ ವಿದ್ಯಾನಂದಸ್ವಾಮಿಯವರನ್ನೂ, ಪಿ. ವಿ. ಆರ್. ಕೆ. ಪ್ರಸಾದರನ್ನೂ ಕಾಣಬಹುದು.



## ಮಲಯಾಳ ಸದ್ಗುರು ಸೇವಾಶ್ರಮ ದಶಮ ವಾರ್ಷಿಕೋತ್ಸವ

ದಿನಾಂಕ 29–1–81 ರಿಂದ 2–2–81 ರವರೆಗೆ ಶ್ರೀ ಮಲೆಯಾಳ ಸದ್ಗುರು ಸೇವಾ ಸಮಾಜದ ದಶಮ ವಾರ್ಷಿಕೋತ್ಸವವು ತಿರುಪತಿಯ ಶ್ರೀ ಅನ್ನಮಾಚಾರ್ಯ ಕಲಾ ಮಂದಿರದಲ್ಲಿ ತಿ. ತಿ ದೇ. ಸಹಕಾರದೊಡನೆ ಸರಳವಾಗಿ ಶ್ರೀ ವ್ಯಾಸಾಶ್ರಮ ಪೀಠಾಧಿಪತಿ ಶ್ರೀ ಶ್ರೀ ವಿದ್ಯಾನಂದಸ್ವಾಮಿಯವರ ಅಧ್ಯಕ್ಷತೆಯಲ್ಲಿ ನಡೆಯಿತು.

ನಾಲ್ಕುದಿನಗಳ ಕಾಲ ನಡೆದ ಈ ಉತ್ಸವದಲ್ಲಿ ಆಶ್ರಮಕಾರ್ಯದರ್ಶಿ ಶ್ರೀ ಸ ಮು ದ್ರಾ ಲ ಲ ಕ್ಷ್ಮ ಣ ಯ್ಯ ಅವರು ಸ್ವಾಗತಿಸಿದರು. ಡಾ॥ ಆ ರ್ಕ ಸೋ ಮ ಯಾ ಜಿ, ಶ್ರೀ. ಎಸ್ ನಾಗಯ್ಯ, ಶ್ರೀ ಶಾರದಾಪ್ರಿಯದರ್ಶಿನಿಸ್ವಾಮಿನಿ ಅವರುಗಳು ಮೊದಲ ದಿನ ಉಪನ್ಯಾಸಗಳನ್ನು ನೀಡಿ ಭಗವದ್ಗೀತೆಯ ಪ್ರಾಮುಖ್ಯತೆಯನ್ನು ಹಲವು ಕೋನಗಳಿಂದ ಪರಿಚಯಿಸಿ ಕೊಟ್ಟರು. ಶ್ರೀ ಶ್ರೀಗಳು ಭಗವದ್ಗೀತೆಯ ಭಕ್ತಿಯೋಗವನ್ನು ಮೂರು ಪ್ರಾತಃಕಾಲಗಳಲ್ಲಿ ವಿವರಿಸಿದರು.

30–1–81 ರಂದು ಸಂಜೆಯ ಉತ್ಸವದಲ್ಲಿ ಭಾಗವಹಿಸಿದ ಕಾರ್ಯನಿರ್ವಹಣಾಧಿಕಾರಿ ಶ್ರೀ ಪಿ. ವಿ. ಆರ್. ಕೆ. ಪ್ರಸಾದರು ದೇವಸ್ಥಾನಗಳ ಹಿಂದೂಧರ್ಮ ಶಿಕ್ಷಣ ಸಂಸ್ಥೆಯು ಗೀತಾಪ್ರಚಾರ ಮೊದಲಾಗಿ ಹಿಂದೂ ಧರ್ಮ ಪ್ರಸಾರ ಕಾರ್ಯದಲ್ಲಿ ನಿರತರಾದ ಇತರ ಸಂಸ್ಥೆಗಳಿಗೂ ನೆರವು ನೀಡುವುದೆಂದರು.

ತತ್ಸಂದರ್ಭದಲ್ಲೇ ಪ್ರತಿವರ್ಷವೂ ನಡೆಯುವಂತೆ ಗೀತಾಪಠನ ಸ್ಪರ್ಧೆಗಳು ಏರ್ಪಟ್ಟಿದ್ದವು. ಸುಮಾರು 172 ಮಂದಿ ಬಾಲಕ ಬಾಲಕಿಯರು ಭಾಗವಹಿಸಿದ ಸ್ಪರ್ಧೆಗಳಲ್ಲಿ ಚಿ॥ ಎ. ಎಸ್. ಎಂ. ಆರ್. ಶೇಷಗಿರಿರಾವ್ (ಶ್ರೀ ಎ. ಅಪ್ಪಾರಾವ್ ಅವರ ಪುತ್ರ) ಪ್ರಥಮ ಬಹುಮಾನವಾಗಿ ರಜತ ಪದಕವನ್ನು ಪಡೆದ. ಭಾಗವಹಿಸಿದವರಿಗೆಲ್ಲ ಪುಸ್ತಕ ಬಹುಮಾನ ನೀಡಲಾಯಿತು.

 

# ಯುವವಾಣಿ

## ಪಂಪನ ಕರ್ಣ

—ಡಾ॥ ಅನಂತರಂಗಾಚಾರ್.

ಭಾರತದಲ್ಲಿ ಪ್ರತಿನಾಯಕರಾದ ಕರ್ಣ ದುರ್ಯೋಧನರು ನಾಯಕರಾದ ಭೀಮಾರ್ಜುನರಿಗಿಂತ ಪಂಪನ ಹೃದಯವನ್ನು ಸೂರೆಗೊಂಡಿದ್ದಾರೆ ಪಂಪನು ಅವರ ಪೌರುಷಕ್ಕೆ ಮೆಚ್ಚಿದ್ದಾನೆ. ಅವರ ದುಸ್ಥಿತಿಗೆ ಮರುಗಿದ್ದಾನೆ. ಸಹಾನುಭೂತಿಯಿಂದ ಕಣ್ಣೀರುಗರೆದಿದ್ದಾನೆ. ಅದರಲ್ಲಿಯೂ ಕರ್ಣನ ತ್ಯಾಗ ಅಣ್ಮುಗಳನ್ನು ಅತ್ಯತಿಶಯವಾಗಿ ಪ್ರಶಂಸಿಸಿದ್ದಾನೆ. ಅವನ ದೃಷ್ಟಿಯಲ್ಲಿ ಕರ್ಣನ ದುರಂತ ಕಥೆಯೇ ಭಾರತ. ಅದನ್ನೇ ಅವನು 'ಕರ್ಣಂಗೊಡ್ಡಿತ್ತು ದಲ್ ಭಾರತಂ'ಎಂಬ ಅರ್ಜುನನ ಮಾತಿನಲ್ಲಿ ಸ್ಪಷ್ಟಪಡಿಸಿದ್ದಾನೆ. ಕರ್ಣನಲ್ಲಿ ತನಗಿರುವ ಬಹು ಉಚ್ಚಭಾವವೂ ಸಹಾನುಭೂತಿಯೂ ವಾಚಕರಲ್ಲಿ ನಿರರ್ಗಳವಾಗಿ ಕೋಡಿವರಿವಂತೆ ಅವನ ಪಾತ್ರವನ್ನು ರಚಿಸಿದ್ದಾನೆ.

ಕರ್ಣನ ಕಥೆ ಕರುಣದ ಕತೆ—ಅವನೊಬ್ಬ ದುರಂತ ವ್ಯಕ್ತಿ. ಬಾಲೆಯೊಬ್ಬಳ ಹುಡುಗಾಟದ ಅವಿವೇಕದ ಫಲವಾಗಿ ಕರ್ಣನು ಜನಿಸಿದನು. ಕೊಡಗೂಸುತನದ ಭಯದಿಂದ ತಾಯಿಯು 'ನಿಧಾನಮನೀಡಾಡುವಂತೆ ಕೈಯ ಕೂಸನ್ನು ಗಂಗೆಯಲ್ಲಿ ಈಡಾಡಿದಳು'. ಗಂಗಾದೇವಿ ಆ ರೂಪನ್ನು ಮುಳುಂಗಲೀಯದೆ ತನ್ನ ತೆರೆಗೈಗಳಿಂದ ದಡ ಸೇರಿಸಿದಳು. ಸೂತನೊಬ್ಬನದನ್ನು ಕಂಡು ನಿಧಿ ಕಂಡ ಬಡವನಂತೆ ಸಂತೋಷಿಸಿ ಎತ್ತಿ ಸಲಹಿದ. ಮಗುವಿಗೆ ಸುಷೇಣ, ಕರ್ಣನೆಂಬ ಅನ್ವರ್ಥನಾಮಗಳಾದುವು. ಸೂತಪುತ್ರನಾಗಿಯೇ ಬೆಳೆದನಾದರೂ ಆತನ ಚಾಗದ ಬೀರದ ಮಾತು ದೇವೇಂದ್ರನನ್ನೂ ಮುಟ್ಟಿತು-ಮುಂದೆ ಅರ್ಜುನನಿಗೂ ಅವನಿಗೂ ಒದಗುವ ದ್ವಂದ್ವಯುದ್ಧವನ್ನು ದಿವ್ಯಜ್ಞಾನದಿಂದ ತಿಳಿದು ಮಗನ ಸಹಾಯಕ್ಕಾಗಿ ಅವನೊಡನೆ ಹುಟ್ಟಿದ ಕವಚಕುಂಡಲಗಳನ್ನು ಇಂದ್ರನು ಯಾಚಿಸಿದನು. ತಾನೆ 'ಕೊಳ್' ಎಂದು ಅರಿದೀಡಾಡಿದನಿಂದ್ರಂಗೆ ರಾಧೇಯಂ'. ಬಳಿಕ ರೇಣುಕಾನಂದನನಲ್ಲಿ ವಿದ್ಯಾಪಾರಂಗತನಾದ. ಅಲ್ಲಿಯೂ ಇಂದ್ರನ ಕುತಂತ್ರದಿಂದ ಕರ್ಣನಿಗೆ ಹಿಂಸೆಯಾಯಿತು. ಶಾಪಹತನಾಗಿ ಹಿಂತಿರುಗಿದ. ದ್ರೋಣಾಚಾರ್ಯರ ಅಸ್ತ್ರವಿದ್ಯಾಶಿಕ್ಷಣದ ವೈಭವವು ಅವನ ಕಿವಿಗೂ ಬಿದ್ದಿತು. 'ಕೌರವರ್ಗೆಲ್ಲಂ ಪ್ರಾಣಂ ಬಪಾರ್ಕೃತಿಯೊಳೆ ಬಾಣಾಸನ ಬಾಣಪಾಣಿ ಕರ್ಣ,' ಅಲ್ಲಿಗೆ ಹೋದ. ವಿಕ್ರಮಾರ್ಜುನನಿಗೂ ಇವನಿಗೂ ಸೆಣಸು ಮೊದಲಾಯಿತು. ಒಂದು ದಿನ ಬಾಲಕರ ವಿದ್ಯಾಪರೀಕ್ಷಣದ ಸಂದರ್ಭದಲ್ಲಿ ಕರ್ಣನೂ ಶರಪರಿಣತಿಯಿಂದ ಅತಿರಥಮಥನನಾದ ಅರ್ಜುನನೊಡನೆ ಸ್ಪರ್ಧಿಸಿದ. ಆಗ ದ್ರೋಣ ಕೃಪಾಚಾರ್ಯರು ಮಧ್ಯೆ ಬಂದು 'ನಿನ್ನ ತಾಯ ತಂದೆಯಂ ಭಾವಿಸದೆ ಕರ್ಣ ನುಡಿವಂತೆ ಆವುದು ಸಮಕಟ್ಟು ನಿನಗಂ ಅರಿಕೇಸರಿಗಂ' ಎಂದು ಅವನ ಕುಲವನ್ನು ಅವಹೇಳನ ಮಾಡಿದರು. ದುರ್ಯೋಧನನಿಗೆ ಅದು ಸಹಿಸಲಿಲ್ಲ, 'ಕುಲಮೆಂಬುದುಂಟೆ, ಬೀರಮೆ ಕುಲಮಲ್ಲದೆ, ಕುಲಮನಿಂತು ಪಿಕ್ಕದಿರಿಂ ಈಗಳೆ ಕುಲಜನಂ ಮಾಡಿ ತೋರ್ಪೆನ್" ಎಂದು ಅವನಿಗೆ ಅಂಗರಾಜ್ಯಾಭಿಷೇಕವನ್ನು ಮಾಡಿ ಕರ್ಣನನ್ನು ಕುರಿತು 'ನೀನೆನಗೊಂದ ನೀಯಲ್ವೇಳ್ಪುದು',

ಪೊಡಮಡುವರ್ ಜೀಯ ಎಂಬರ್
ಕುಡು, ದಯೆಗೆಯ್ ಏಂ ಪ್ರಸಾದಂ ಎಂಬಿವು ವೆರರೊಳ್
ನಡೆಗೆ, ಎಮ್ಮ ನಿನ್ನ ಯೆಡೆಯೊಳ್
ನಡೆಯಲ್ವೇಡ, ಎನಗೆ ಕೆಳೆಯನೈ ರಾಧೇಯ ॥

ಎಂದು ಬೇಡಿಕೊಂಡ, ಮುಂದೆ ಅವನ ಮೈತ್ರಿ ಅನ್ಯಾದೃಶವಾಯಿತು. ಕರ್ಣನ ಸ್ವಾಮಿ ಭಕ್ತಿಯೂ ಕೊನರಿ ಮೊಗ್ಗಾಯ್ತು. ಈ ಮಧ್ಯೆ ಕೌರವ ಪಾಂಡವರ ದ್ವೇಷ ಬೆಳೆದು ವನವಾಸ ಅಜ್ಞಾತವಾಸಗಳು ಮುಗಿದವು. ಕೃಷ್ಣನ ಸಂಧಿಯ ಪ್ರಯತ್ನವೂ ವಿಫಲವಾಯಿತು. ಇಲ್ಲಿಂದ ಮುಂದೆ ಈಗಾಗಲೇ ತಲೆದೋರಿದ್ದ ಕರ್ಣನ ದುರಂತತೆ ಇಮ್ಮಡಿಯಾಯಿತು. ಸಾಮೋಪಾಯವು ಸಾಗದಿರಲು ಕೃಷ್ಣನು ಕರ್ಣನನ್ನು ಭೇದಿಸಲು ಅವನ ಮನೆಗೇ ಬಂದು ರಥದಿಂದಿಳಿದು ಅವನನ್ನು ಬಹು ಸ್ನೇಹದಿಂದ ಸಂಬೋಧಿಸಿ ಸ್ವಲ್ಪದೂರ ದಾರಿ ಕಳುಹಿಸಿ ಬರುವಂತೆ ಬಾ ಎಂದು ಕರೆದು ಕೊಂಡು ಹೋಗಿ ಏಕಾಂತವಾಗಿ ಒಂದು ಕಡೆ ನಿಂತು;



ಇಂದ್ರ – ಕರ್ಣ

ಭೇದಿಸಲಿಂದೆ ದಲ್ ನುಡಿದರ್ ಎನ್ನದಿರು
ಒಯ್ಯನೆ ಕೇಳ, ಕರ್ಣ ನಿ
ನ್ನಾದಿಯೊಳಬ್ಬೆ ಕೊಂತಿ ನಿನಗಮ್ಮನೆಹರ್ಪತಿ
ಪಾಂಡು ನಂದನರ್
ಸೋದರರ್, ಎಯ್ದೆ ಮಯ್ದುನನೆ ನಾನ್
ಪೆರತೇನ್ ಪಡೆಮಾತೊ ನಿನ್ನದೀ
ಮೇದಿನಿ, ಪಟ್ಟಮುಂ ನಿನತೆ, ನೀನಿರೆ ಪತ್ತೆ
ಪೆರರ್ ನರೇಂದ್ರರೇ ॥

ದುರ್ಯೋಧನನು ಈ ವೃತ್ತಾಂತವನ್ನು ಸತ್ಯಂತ ಪರೆಂಬ ದಿವ್ಯಜ್ಞಾನಿಗಳಿಂದ ತಿಳಿದು 'ಪಾಟಿಸುವೆನ್ ಒಯ್ಯನೆ ಮುಳ್ಳೊಳೆ ಮುಳ್ಳನೆಂದು ತಾನ್ ಈ ನಯದಿಂದೆ ಪೆರ್ಚೆ ಪೊರೆದಳ್ಕಳೊಳಂದೊಡನುಂ ಡನಲ್ಲನೇ' ಎಂದು ವಿಷಬೀಜವನ್ನು ಬಿತ್ತಿದನು. ಕರ್ಣನಿಗೆ ಎಂತಹ ಧರ್ಮಸಂಕಟ; ಸ್ವಲ್ಪ ಮನಸ್ಸ ನ್ನಿಳಿಸಿದ್ದರೆ ಭಾರತದ ಗತಿ ಹೇಗೆ ತಿರುಗುತ್ತಿತ್ತು! ಕರ್ಣನೆಂದಿಗೂ ಜರುಗುವವನಲ್ಲ. ಅವನಲ್ಲಿ ಸಂತೋ ಷವೂ ದುಃಖವೂ ಏಕಕಾಲದಲ್ಲಿ ತಲೆದೋರಿದುವು. 'ಏಕೆ ಪೇಳ್ದಿರೊ ಸುಯೋಧನನ್ ಎನಗೊಳ್ಳಿಕೈದ ಕೃತ್ಯಮಂ ಪೆರಗಿಕ್ಕಿ ನೆಗಳ್ತೆ ಮಾಸೆ ನಣ್ಪಿನ ನೆಪದಿಂದೆ ಪಾಂಡವರನ್ ಆನ್ ಒಳವೊಕ್ಕೊಡೆ ನೀಮೆ ಪೇಸಿರೆ? ಭೂಪೋತ್ತಮನಂ ಬಿಸುಟ್ಟು ಇರದೆ ನಿಮ್ಮೊಳೆವೊಕ್ಕೊಡೆ ಬೇಡನಲ್ಲೆನೆ?' ಎಂದು ಖಡಾಖಂಡಿತವಾಗಿ ತಿಳಿಸಿ ತನ್ನಲ್ಲಿಯೇ 'ಕುರುಪತಿ ಗಿಲ್ಲ ದೈವಬಲಂ, ಸೋದರರನೆಂತು ಕೊಲ್ವೆಂ ಅಳ್ಕಿ ಯೊಳೆನ್ನ ಪೊರೆದು ಎಯ್ದೆ ನಂಬಿದ ನೃಪಂಗೆ ತಾಜಿಯೊಳ್ ತಪ್ಪುವೆಂ'. ಈ ಇಬ್ಬಗೆಯಾದ ಸಮಸ್ಯೆಯೂ ಈ ಕಠಿಣ ನಿರ್ಧಾರವೂ ಭಾರತದಲ್ಲಿ ಮತ್ತಾರಿಗೂ ಇಲ್ಲ. ದುರ್ಯೋಧನನ ಪಕ್ಷೀಯರನೇಕರು ಉಪ್ಪಿನ ಋಣಕ್ಕಾಗಿ ಶರೀರವನ್ನು ಒಡೆಯನಿಗೆ ಒತ್ತೆಯಿಟ್ಟು ಹೃದಯವನ್ನು ಪಾಂಡವರಿಗೆ ಧಾರೆಯೆರೆದಿದ್ದರು. ರಾಜನು ಆಕ್ಷೇಪ ಮಾಡಿದಾಗ ಭರದಿಂದ ಕಾದಿ ದರೂ ಅವರ ಸಹಾಯದಿಂದಲೇ ಪಾಂಡವರು ಜಯಶಾಲಿಗಳಾದರು. ಕರ್ಣನದು ಹಾಗಲ್ಲ, ಸ್ವಾಮಿ ಭಕ್ತಿಗೂ ಕರ್ತವ್ಯನಿಷ್ಠೆಗೂ ಸೋದರ ಪ್ರೇಮಕ್ಕೂ ಮಧ್ಯೆನಡೆದ ಹೋರಾಟ. ವಿಧಿಯೇ ಉದ್ದೇಶಪೂರ್ವಕವಾಗಿ ಆ ಸ್ಥಿತಿಯನ್ನು ತಂದೊಡ್ಡಿ ತೆಂದು ಕಾಣುತ್ತದೆ. ಕರ್ಣವಧಾನಂತರ ಪಾಂಡ ವರು ದುಃಖ ಪಡುವಾಗ ಹೇಳುವಂತೆ ಮೊದಲೇ ಅವನ ಸಂಬಂಧ ತಿಳಿದಿದ್ದರೆ ಅವನನ್ನೇ ರಾಜನ ನ್ನಾಗಿ ಮಾಡಿ ತಾವು ಅವನ ಸೇವೆ ಮಾಡಲು ಸಿದ್ಧರಾಗಿದ್ದರು.ದುರ್ಯೋಧನನಾದರೋ ಅದಕ್ಕಿಂತ ಮಿಗಿಲಾಗಿ 'ಧರಾತಳಮಂ ಅವನಿಗಿತ್ತು' ಅವನು ಕೊಟ್ಟಿದ್ದನ್ನು ಪ್ರಸಾದವೆಂದು ಸ್ವೀಕರಿಸಿ ಮನೋ ಮುದದಿಂದ ಇರಬೇಕೆಂದಿದ್ದ. ವಿಧಿಯು ಇದಕ್ಕೆ ಅವಕಾಶ ಕೊಡಲಿಲ್ಲ. ಇಲ್ಲದ ತೊಡಕುಗಳನ್ನೊಡ್ಡಿ ಅವನನ್ನೇ ಆಹುತಿಯನ್ನಾಗಿ ತೆಗೆದುಕೊಂಡಿತು.

ಕೃಷ್ಣನು ಅಲ್ಲಿಗೇ ಬಿಡಲಿಲ್ಲ ಕುಂತಿಯನ್ನು ಕರ್ಣನಲ್ಲಿಗೆ ಕಳುಹಿಸಿದ. ಅವಳು ಬಂದು 'ನಿನ್ನನು ಜರ್ ನಿನ್ನಂ ಬೆಸಕೆಯ್ಯೆ ನೀನೆ ನೆಲನಳ್ವಾದು ಕಂದ' ಎಂದು ಬೇಡಿದಳು. ತಂದೆಯಾದ ದಿನಪನು ಬಂದು 'ಅಂದಿನಂತೆ ಇಂದೂ ಮೋಸ ಹೋಗ ಬೇಡ' ಎಂದು ಎಚ್ಚರಿಸಿದ. ಕರ್ಣನಾದರೋ ಮುಗುಳ್ನಗೆ ನಕ್ಕು:

ಪಾಳಿಯನೊಕ್ಕು ಅಳ್ದನಗೆಯ್ದು ಸತ್ಯತಮಂ ಪಿಂತಿಕ್ಕಿ ಜೋಳಕ್ಕೆ ತಪ್ಪಿಯುಮಿಂ ಬಾಳ್ವುದೆ ಪೂಣ್ದು ನಿಲ್ಲದಿಕೆಯಂ ಬಾಳ್ವಂತು ವಿಖ್ಯಾತ ಕೀರ್ತಿಯವೊಲ್ ಈ ಒಡಲ್ ಅಬ್ಬೆ ವೇಳಂ ಎನಗೇಂ ಕಲ್ಪಾಂತರ ಸ್ಥಾಯಿಯೇ?

ಮೀಂಗುಲಿಗನೆನಾಗಿಯುಂ ಅಣಮಂ
ಆಂ ಗುಣಮನೆ ಬಿಸುಟೆನಿಲ್ಲ, ನಿಮಗಂ ಮಗನಾ
ದಂಗೆನಗೆ ಬಿಸುಡಲಕ್ಕುಮೆ
ನೀಂ ಗಳ ಪಂಬಲನೆ ಬಿಸುಡಿಮಿನ್ನೆನ್ನೆಡೆಯೊಳ್
ಪಿಡಿಯೆಂ ಪುರಿಗಣೆಯಂ ನರನ್
ಎಡೆಗೊಂಡೊಡಂ, ಉಳಿದ ನಿನ್ನ ಮಕ್ಕಳನ್,
ಇನ್, ಏ
ದೊರ್ಡಂ ಅರಿಯೆಂ ಪೆರ್ಜಸಮನೆ
ಪಿಡಿದು ಎನ್ನನೆ ರಣದೊಳ್, ಅಳಿವೆಂ, ಇರ
ದಡಿಯೆತ್ತಿಂ

ಎಂತಹ ನಿರ್ಧಾರ ಮುಂದೆ ಯುದ್ಧವೇ ಕೈಗಟ್ಟಿತು. ಕರ್ಣನ ಸ್ವಾಮಿನಿಷ್ಠೆ ಸ್ವಲ್ಪವೂ ಸಡಿಲವಾಗಲಿಲ್ಲ. ಕುರುಕುಲ ಪಿತಾಮಹರಾದ ಭೀಷ್ಮರಿಗೆ ಪ್ರಥಮ ಸೇನಾ ಪಟ್ಟಾಭಿಷೇಕವಾಯಿತು. ಕರ್ಣನಿಗೆ ಈ ವಿಷಯದಲ್ಲಿ ಬಹಳ ಅಸಮಾಧಾನ ಅವರು ಈ ಕಾರ್ಯದಲ್ಲಿ ಮನಸ್ಸು ಮಾಡುವುದಿಲ್ಲವೆಂದು ಸ್ವಾಮಿಗೆ ಜಯಲಭಿಸುವುದಿಲ್ಲವೆಂದು ಅವನ ಸಂದೇಹ;

ಆದಿಯೊಳಿವರುಂ ಪಿರಿದೊಂ
ದಾದರದಿಂ ನಡೆಸಿದ ಅಜ್ಜರಪ್ಪರ್,
ಅದರಿಂದಂ
ಕಾದರ್, ಇವರವರೊಳ್, ಅವರುಂ
ಕಾದರ್ ನೆರೆದಿವರೊಳ್......

ಸತ್ಯವನ್ನು ಮರೆಮಾಚುವುದರಿಂದೇನು ಪ್ರಯೋ ಜನ! ಸ್ವಾಮಿಹಿತಕ್ಕೆ ಭಂಗಬಂದರೆ ಕರ್ತವ್ಯ ಪರಾಙ್ಮುಖನಾದ ಹಾಗಾಗಲಿಲ್ಲವೇ? ಆದುದರಿಂದ ಧೈರ್ಯದಿಂದಲೇ ಕರ್ಣನು 'ಗುರುಗಳಂ ಕುಲ ವೃದ್ಧರಂ ಆಜಿಗುಯ್ದು ಕೆಮ್ಮಗೆ ಪಗೆವಾಡಿಯೊಳ್ ನಗಿಸಿಕೊಂಡೊಡೆ ಬಂದಪುದೇಂ ಸುಯೋಧನಾ,' 'ಪಗೆವರ ನಿಟ್ಟೆಲ್ವಂ ಮುರಿವೊಡೆನಗೆ ಪಟ್ಟಂಗಟ್ಟಾ' ಎಂದು ನಿಸ್ಸಂಕೋಚವಿಂದ ಹೇಳುತ್ತಾನೆ.

ದ್ರೋಣಾಚಾರ್ಯರು ಕರ್ಣನ ಹೃದಯವನ್ನು ಅರಿಯಲಿಲ್ಲ. ಕುಲಜರೂ ಭುಜಬಲಯುತರೂ ಆದ ಭೀಷ್ಮರನ್ನು ತೆಗಳಿದನಲ್ಲ ಎಂದು 'ಕುಲಜರಂ ಈ ಸಭಾಮಧ್ಯದೊಳಗ್ಗಲಿಸಿದ ಮದ ದಿಂದ ನಾಲಗೆ ಕುಲಮಂ ತುಬ್ಬುವವೋಲ್ ಉರದೆ ನೀ ಕೆಡೆನುಡಿದಯ್' ಎಂದು ಅವನ ಕುಲದ ವಿಷಯವಾಗಿ ಕೆಣಕಿದರು ಕರ್ಣನಿಗೆ ರೇಗಿಹೋಯಿತು

ಕುಲಮನೇ ಮುನ್ನ, ಉಗ್ಗಡಿಪರೇಂಗಳ, ನಿಮ್ಮ
ಕುಲಂಗಳಾಂತು ಮಾ
ರ್ಮಲೆವರನ್, ಆಟ್ಟೆ ತಿಂಬುವೆ, ಕುಲಂ
ಕುಲಮಲ್ತು, ಚಲಂ ಕುಲಂ, ಗುಣಂ
ಕುಲಂ, ಅಭಿಮಾನವೊಂದೆ ಕುಲಂ, ಅಣ್ಮು
ಕುಲಂ ಬಗೆಗೊಳಲ್ ಈ
ಕಲಹದೊಳಣ್ಣ ನಿಮ್ಮ ಕುಲಂ, ಆಕುಲಮುಂ
ನಿಮಗುಂಟುಮಾಡುಗಂ
ಗಂಗಾಸುತಂ ಪೃಥಾಸುತ
ರಂಗೆಲ್ಲೊಡೆ ತಪಕೆ ಪೋಪೆನ್, ಅವರ್ಗಳ
ಕೈಯೊಳ್
ಗಾಂಗೇಯನ್ ಅಳಿದೊಡೆ, ಅಹಿತರನ್
ಆಂ ಗೆಲೆ ತಳ್ತಿರಿವೆನ್, ಅನ್ನೆಗಂ ಬಿಲ್ವಿಡಿಯೆನ್

ಎಂದು ಪ್ರತಿಜ್ಞೆಮಾಡುವನು, ಭೀಷ್ಮರೇನು ಸಾಮಾನ್ಯರೇ! ಮುದಿಸಿಂಹ; ಅನನ್ಯ ಸಾಮಾ ನ್ಯವಾದ ಅನುಭವ, ಸ್ವಲ್ಪವೂ ಉದ್ರೇಕಗೊಳ್ಳದೆ ನಿಧಾನದಿಂದ,

ಕಲಿತನದುರ್ಕು, ಜವ್ವನದ ಸೊರ್ಕು,
ನಿಜೇಶನ ನಚ್ಚು, ಮಿಕ್ಕ ತೋ
ಳ್ವಲದ ಪೊಡರ್ಪು ಕರ್ಣ ನಿನಗುಳ್ಳನಿತು
ಏನ್ ಎನುಗುಂಟೆ? ಭಾರತಂ
ಕಲಹಂ, ಇದಿರ್ಚುವನ್ ಅರಿಗಂ ಅಪ್ಪೊಡೆ
ಮೊಕ್ಕಳಮೇಕೆ ನೀ ಪಳಂ
ಚಲದಪೆಯಣ್ಣ, ಸೂಳ್ ಪಡೆಯಲಪ್ಪುದು
ಕಾಣ ಮಹಾಜಿರಂಗದೊಳ್ ॥

ಎಂದು ಬಹುವ್ಯಂಗ್ಯವಾಗಿ ನುಡಿದು ತಾವು ಅಘಟನಘಟನಾಸಾಮರ್ಥ್ಯದಿಂದ ಯುದ್ಧಮಾ ಡುವುದಾಗಿ ಪ್ರತಿಜ್ಞೆಮಾಡುವರು. ಈ ಸನ್ನಿವೇಶ ಕರ್ಣನ ಪಾತ್ರದ ಒಂದು ಮುಖಮಾತ್ರ. ಈಗ ಹೀಗೆ ವರ್ತಿಸಿದವನು ಬೇರೊಂದು ಸಮಯದಲ್ಲಿ ಹೇಗೆ ನಡೆದುಕೊಳ್ಳುತ್ತಾನೆ! ಭೀಷ್ಮರು ಶರಶಯ್ಯಾಗತರಾಗಲು ದುರ್ಯೋಧನಾದಿಗಳು ಕರ್ಣನಿಗೆ ಸೇನಾಪತ್ಯಾಭಿಷೇಕವನ್ನೂ ನಿರ್ಧರಿ ಸುತ್ತಾರೆ. ಆಗ ಕರ್ಣನು 'ಸುರಸಿಂಧುಭವನಿಂ ಬಳಿಕ್ಕೆ ಪೆರರಾರ್ ಸೇನಾಧಿಪತ್ಯಕ್ಕೆ ತಕ್ಕರ್ ಲೋಕೈಕ ಧನುರ್ಧರಂ ಕಳಶಜಂ ತಕ್ಕಂ' ಅವರಿಗೆ ಪಟ್ಟವನ್ನು ಕಟ್ಟಿ, ನಾನು ಅವರಿಗೆ ಸಹಾಯಕನಾಗಿ ಯುದ್ಧಮಾಡುತ್ತೇನೆ ಎಂದು

ಹೇಳಿ ತನ್ನ ಪ್ರತಿಜ್ಞೆಯನ್ನು ಲಕ್ಷ್ಯಮಾಡದೆ ಯುದ್ಧಮಾಡಿ ತನಗೆ ಇದಿರಾದ ಧರ್ಮರಾಜ ಭೀಮಸೇನರನ್ನು ಬಡಿದು ತಾಯಿಗೆ ತಾನು ಕೊಟ್ಟ ವಾಗ್ದಾನಕ್ಕನುಗುಣವಾಗಿ ಅವರನ್ನು ಕೊಲ್ಲದೆ ತನ್ನ ಪರಾಕ್ರಮವನ್ನು ಮೆರೆಯುತ್ತಾನೆ. ಧೃಷ್ಟದ್ಯುಮ್ನನಿಂದ ದ್ರೋಣಾಚಾರ್ಯರು ಹತರಾಗುತ್ತಾರೆ ಸೇನಾಧಿಪತ್ಯಕ್ಕೆ ಕರ್ಣನ ಸರದಿ ಬರುತ್ತದೆ. ಪಟ್ಟಾಭಿಷಿಕ್ತನಾದ ದಿನ ಪ್ರಾತಃಕಾಲ ನಿತ್ಯಕರ್ಮಾನುಷ್ಠಾನವನ್ನು ತೀರಿಸಿಕೊಂಡು ನಿತ್ಯದಾನಕ್ಕೆಂದು ತರಿಸಿದ ಹದಿನೆಂಟು ಕೋಟಿ ಹೊನ್ನುಗಳನ್ನು ದೀನಾನಾಥರಿಗೆ ಕೊಡುಗೈಯಿಂದ ದಾನಮಾಡಿ ಸುವರ್ಣ ರಥವನ್ನು ಹತ್ತಿ. "ಓರ್ವನೆ ಶರಶಯನದೊಳಿರ್ದ ಗಾಂಗೇಯನಲ್ಲಿಗೆ ಬಂದು ರಥದಿಂದಮಿಳಿದು ಮೂರುಸೂಳ್ ಬಲವಂದು ತದೀಯ ಪಾದಪದ್ಮಂಗಳಂ ತನ್ನ ತಲೆಯೊಳಿಟ್ಟುಕೊಂಡು;

ಆನ್ ಮಾತರಿಯದೆ ಮುಳಿದುಂ
ನಿಮ್ಮಡಿಯಂ ನೋಯೆ ನುಡಿದೆನ್, ಉರದೆ ಏಳಿಸಲ್ ಏನ್
ಎಮ್ಮಳವೆ? ಮರೆವುದು ಆ ಮನ
ದುಮ್ಮಚ್ಚರಮನ್, ಅಜ್ಜ, ನಿಮ್ಮನ್ ಎರೆಯಲ್ ಬಂದೆಂ ॥
ಧುರದೊಳ್ ನಿಮ್ಮಡಿಯಂ ಗೆಲಲ್
ಅರಿಯದರನ್ ಆ ಪಾಂಡುಸುತರನ್, ಎನ್ನೊಂದಿಗರ್, ಅ
ಚ್ಚರಿಯಲ್ತೆ, ಗೆಲ್ವೆನೆಂಬುದು
ಹರಿಗನೊಳ್, ಇರಿದು, ಎಂತುಂ ಎನ್ನ ಚಲಮನೆ ಮೆರೆವೆಂ ॥

ಎಂದು ಅವರ ಕ್ಷಮೆಯನ್ನು ಬೇಡುವನು. ಅದಕ್ಕೆ ಭೀಷ್ಮಾಚಾರ್ಯರು 'ನುಡಿವುದಂ ಪತಿಭಕ್ತಿಯ ಪೆಂಪಂ ನೀಂ ನುಡಿದೈ,ಪೆರತಂದದಿಂ ನುಡಿದೆಯಲ್ತೆ ಎಂದುದೇಂ ತಪ್ಪಾದುದೇ ? ನಮ್ಮೊವಜಂ ಜಸಂಬಡೆದ ಭಾರ್ಗವರಪ್ಪುದರಿಂದಂ ನಾಂ ನಂಟರುಮಂಗಪತಿ, ಅಲ್ಲದೆಯುಂ ನೀಂ ನಮಗೆ ಕೊಂತಿಯ ಗಾಂಧಾರಿಯ ಮಕ್ಕಳ ಲೆಕ್ಕದೆ ಮೊಮ್ಮನೈನೆ ?

ನಿನ್ನನೆ ನಚ್ಚಿದಂ ಕುರುಮಹೀಪತಿ
ನಿನ್ನಶರಾಳಿಗಳ್ಗೆ ಮು
ನ್ನಂ, ನಡುಗುತ್ತಮಿರ್ಪುದು ಅರಿಸಾಧನ
ಸಂಪಂದಂ ಅಂತೆ ಶಸ್ತ್ರಸಂ
ಪನ್ನನೆ ಆಗಿ ಶಲ್ಯನೆ ಸಾರಥಿಯಾಗಿರೆ
ಮಾಡಿ ಕಾದು ನೀಂ

ಎಂದು ತಮ್ಮ ನಣ್ಣನ್ನುಪದೇಶಿಸಿ ಆಶೀರ್ವಾದ ಮಾಡಿ ಗೆಲ್ಲುವ ಉಪಾಯವನ್ನು ಸೂಚಿಸಿ ಕಳುಹಿಸುತ್ತಾರೆ. ಅದರಂತೆ ದುರ್ಯೋಧನನು ಶಲ್ಯನನ್ನು ಕರ್ಣನ ಸಾರಥಿಯಾಗಿರುವಂತೆ ಪ್ರಾರ್ಥಿಸುತ್ತಾನೆ. ಆದಕ್ಕೆ ಮದ್ರರಾಜನು ಕೆನಿಸಿ ಕಿಂಕಿರಿ ಪೋಗಿ' ಸೂತಪುತ್ರನಿಗೆಸಾರಥಿಯಾಗಲು ನಿರಾಕರಿಸುವ ಮಾತನಾಡುತ್ತಾನೆ. ದುರ್ಯೋಧನನು ಕರ್ಣನ ಹಿರಿಮೆಯನ್ನು ನಿವರಿಸುತ್ತ,

ಕುಲಹೀನನೆ ಅಪ್ಪೊಡೆ ಕೇ
ವಲಬೋಧಂ ಪರಶುರಾಮನ್, ಏನ್ ಈಗುಮೆ ನಿ
ರ್ಮಲಿನ ಕುಲಂಗಳ್ಗಮೆ ಪಡಿ
ಯಲಲ್ಲದಂತಪ್ಪ ದಿವ್ಯ ಬಾಣಾವಳಿಯಂ ।
ಮಣಿಕುಂಡಲಮುಂ ಕವಚಂ
ಮಣಿಯದ ಚಾರಿತ್ರಮುಗ್ರತೇಜಮು ಮೀಯೊ
ಳ್ಗುಣಮುಂ ಕಲಿತನಮುಂ ಇದೇಂ
ಪ್ರಣತಾರೀ ಸೂತಸುತನೊಳೊಡವುಟ್ಟು ಗುನೆ ॥

ಎಂದು 'ಶಲ್ಯನ ಹೃಚಲ್ಯಮಂ ಕಳಲೆ' ನುಡಿಯಲು ಅವನ ಸಾರಥ್ಯದಲ್ಲಿ ಕರ್ಣ ತನ್ನ ಪರಾಕ್ರಮವನ್ನು ಅದ್ವಿತೀಯವಾಗಿ ಮೆರೆಯುತ್ತಾನೆ ಕರ್ಣಾರ್ಜುನರ ಕಾಳಗವು ಲೋಕತ್ರಯಕ್ಕೂ ಆಶ್ಚರ್ಯವನ್ನುಂಟುಮಾಡಿತು. ಮೊದಲಿನ ಒಪ್ಪಂದದ ಪ್ರಕಾರ ತನ್ನ ಮಾತಿನಂತೆ ತಲೆಗೆ ಗುರಿಯಿಟ್ಟ ಬಾಣವನ್ನು ಇಳಿಸಿ ಎದೆಗೆ ಹೊಡೆಯದುದರಿಂದ ಶಲ್ಯನು ಕೋಪಗೊಂಡು ತೇರನ್ನೂ ನಡೆಸದೆ ಇಳಿದು ಹೊರಟು ಹೋಗುವನು. ಕರ್ಣನು ತಾನೇ ತೇರನ್ನೂ ನಡಸಿಕೊಂಡು ಏಕಾಂಗ ಶೌರ್ಯದಿಂದ ಯುದ್ಧಮಾಡುವನು ಧರಿತ್ರಿ ಅವನ ತೇರಿನ ಚಕ್ರವನ್ನೂ ನುಂಗುವಳು. ರಥದಿಂದಿಳಿದು ಗಾಲಿಯನ್ನೆತ್ತುವಷ್ಟರಲ್ಲಿಯೇ 'ಅವನನಿಸು'ವಂತೆ ಮುಕುಂದನು ಅರ್ಜುನನಿಗೆ ಬೋಧಿಸಲು ಅರ್ಜುನನಿಗೆ ಎಂದೂ ಇಲ್ಲದ ಮರಕವುಂಟಾಗುತ್ತದೆ. ಅವನು ಹಿಂಜರಿಯುತ್ತಾನೆ. ಕೃಷ್ಣನು ಅವನಿಗೆ ಮರ್ಮೋದ್ಘಾಟನವಾಗುವ ಮಾತುಗಳನ್ನಾಡಿ ರೇಗಿಸುವನು—ಅರ್ಜುನನು ಉತ್ಸಾಹಗೊಂಡು ಕರ್ಣನನ್ನು ಕುರಿತು

ಎನ್ನ ಪೆಸರ್ಗೇಳ್ದು ಸೈರಿಸ
ದನ್ನಯ್ ಅದೆಂತೀಗಳೆನ್ನ ರೂಪಂ ಕಂಡುಂ
ನಿನ್ನರಸನಣುಗದಮ್ಮನ
ನಿನ್ನ ತನೂಭವನ ಸಾವುಗಂಡುಂ ಮಾಣ್ಬಾ?

'ಸೆಟ್ಟಿಯಬಳ್ಳಂ ಕಿರಿದೆಂಬುದೊಂದು ನುಡಿಯಂ ನೀಂ ನಿಕ್ಕುವಂ ಮಾಡಿದೈ ಮಾನಿಸರೇನಿನ್ನೂರು ವರ್ಷಮಂ ಬಳ್ದಪರೇ'?ಎಂದು 'ತನ್ನನುದ್ಘಾಟಿಸಿ ನುಡಿದೊಡೆ ಉಮ್ಮಚ್ಚದೊಳ್'' ಕರ್ಣನು ಮುಗುಳ್ನಗೆಯೊಡನೆ ಹೀಗೆಂದನು:—

ಕಸವರದ ಸವಿಯುಮಂ ಭಯ
ರಸದ ಸವಿಯುಮನದೆಂತುಂ ಅನರಿಯದದುಂ
ವಸುಮತಿಯರಿವುದು ನೀಂ ಪುರು
ಡಿಸಿ ನುಡಿದೊಡೆ ನಿನ್ನ ನುಡಿದ ಮಾತೇರುಗುಮೇ ? ॥
ಒಡಲುಂ ಪ್ರಾಣಮುಮೆಂಬಿವು
ಕಿಡಲಾದುವು ಜಸಮೊಂದೆ ಕಿಡದು ಅದನಾಂ ಬ
ಲ್ವಡಿವಿಡಿದು ನೆಗಳ್ದೆನ್ ಉಳಿದಳಿ
ಪಡೆಮಾತಂ ಮಾಡಿ ನೀನೆ ಕೆಮ್ಮನೆ ನುಡಿವೈ ॥

'ಬಿದಿವಸದಿಂದೆ ಪುಟ್ಟುವುದು, ಪುಟ್ಟಿಸುವಂ ಬಿದಿ, ಪುಟ್ಟಿದಂದಿವಂಗಿದು ಬಿಯಂ, ಒಳ್ಪಿವಂಗಿದು ವಿನೋದಮಿವಂಗಿದು, ಸಾವಪಾಂಗಿವಂಗಿದು, ಪಡೆಮಾತಿವಂಗಿದು ಪರಾಕ್ರಮೆಂಬುದನ್ ಎಲ್ಲ ಮಾಳ್ಕೆಯಿಂ ಬಿದಿ ಸಮಕಟ್ಟಿಕೊಟ್ಟೊಡೆ, ಎಡೆಯೊಳ್ ಕಿಡಿಸಲ್ ಕುಡಿಸಲ್ ಸಮರ್ಥರಾರ್ ?

ಎಂದೀ ಬಾಯ್ಮಾತಿನೊಳ್ ಏ
ವಂದಪುದು, ಅಣ್ಮು, ಅಣ್ಮು, ಕಾದುಕೊಳ್ಳೆ ನುತುಂ ಭೋ
ರೆಂದಿಸೆ ಪೊಸಮನೆಯಂಬಿನ
ತಂದಲ ಬೆಳ್ಸರಿಗಳ್ ಇರದೆ ಕವಿದುವು ನರನಂ ॥

ಪರಬಲಮಥನನಿಗೆ ಆಕ್ರೋಶವು ತಡೆಯದಾಯಿತು. ತಕ್ಷಣವೇ 'ಭುವನ–ಭವನ ಸಂಹಾರಕಮಪ್ಪ ಅಜಂಲಿಕಾಸ್ತ್ರಮನ್ ಅಮೋಘಾಸ್ತ್ರ ಧನಂಜಯಮ್ ಆಕರ್ಣಾಂತಂಬರಂ ತೆಗೆದು ಕರ್ಣನ ಕಂಧರಸಂಧಿಯಂ ನಿಟ್ಟಿಸಿ ಇಸಲ್ ಬಿಳ್ದುದು ಭರದೆ ಸಿಡಿಲ್ದು ಕರ್ಣೋತ್ತಮಾಂಗಂ, ಆಗ:—

ಕುಡುಮಿಂಚಿನ ಸಿಡಿಲುರುಳಿಯೊಳ್
ಒಡಂಬಡಂ ಪಡೆಯೆ ಕರ್ಣನೊಡಲಿಂದಾಗಳ್
ನಡೆ ನೋಡೆನೋಡೆ ದಿನಪನೊಳ್
ಒಡಗೂಡಿದುದೊಂದು ಮೂರ್ತಿ ತೇಜೋರೂಪಂ ॥

ಇಂತಹ ಕರ್ಣನ ಅದ್ಭುತ ಜೀವನ ಪಂಪನ ಹೃದಯವನ್ನು ಸೂರೆಗೊಂಡಿತು ಅರಾತಿಕಾಲಾನಲನ ಸಮಕ್ಷದಲ್ಲಿಯೇ ಮನಮುಟ್ಟುವಂತೆ ನಿರ್ಭಯವಾಗಿ ಆತನ ಚರಮಶ್ಲೋಕವನ್ನು ಹಾಡಿ ಆತನಲ್ಲಿರುವ ಪಕ್ಷಪಾತವನ್ನು ಕವಿತಾಗುಣಾರ್ಣವನು ಪ್ರದರ್ಶಿಸಿದನು.

ನೆನೆಯದಿರಣ್ಣ ಭಾರತದೊಳಿಂ ಪೆರರಾರುಮನ್ ಒಂದೆ ಚಿತ್ತದಿಂ
ನೆನೆವೊಡೆ ಕರ್ಣನಂ ನೆನೆಯ ಕರ್ಣನೊಳ್ ಆರ್ ದೊರೆ ಕರ್ಣನೇರು ಕ
ರ್ಣನ ಕಡುನನ್ನಿ ಕರ್ಣನಳವು, ಅಂಕದ ಕರ್ಣನ ಚಾಗಮೆಂದು ಕ
ರ್ಣನ ಪಡೆಮಾತಿನೊಳ್ ಪುದಿದು ಕರ್ಣರಸಾಯನಮಲ್ತೆ ಭಾರತಂ



# ಸನಾತನ ಧರ್ಮರಂಗ

## ವಚನ ವಲ್ಲರಿ

| | | | | | | | | | | | |
|---|---|---|---|---|---|---|---|---|---|---|---|
| 1 | | | | 2 | × | × | × | 3 | | | |
| × | 4 | × | × | | × | 5 | | | | | 6 |
| × | | × | × | 7 | 8 | | | | | × | |
| 9 | | | | | | | | | 10 | 11 | |
| | | × | × | | | × | × | 12 | | | × |
| 13 | | | | 14 | | | × | | | | 15 |
| | × | × | × | | × | × | × | | | × | |
| | × | 16 | | | | | | | | × | |
| | × | × | × | | × | × | × | × | | × | |
| 17 | | | | | | × | 18 | | | × | × |

### ಎಡದಿಂದ ಬಲಕ್ಕೆ

1. ಮಾಯೆಯನ್ನು ಗೆದ್ದವನ ಇಷ್ಟದೈವ. (4)
3. ಆದ್ಯರಲ್ಲಿ (ಮೇಲಿನಿಂದ ಕೆಳಕ್ಕೆ 10) ಒಬ್ಬರ ಮಾತಿನ ಅಂಕಿತ. (4)
5. ಭಗವಂತನ ಬಗ್ಗೆ ಶಿವ ಭಕ್ತರು ಈ ಭಾವವನ್ನು ಹೊಂದಿರುವರು (5)
7. ಉಡುತಡಿಯ......ಅಕ್ಕ ಈಕೆ. (6)
9. ಶೂನ್ಯಸಂಪಾದನೆಯನ್ನು ಮೊದಲಿಗೆ ಕೃತಿಗೊಳಿಸಿದಾತ (12)
13. ಶಿವಶರಣರಲ್ಲಿ ಮತ್ತೊಬ್ಬ ಆದ್ಯ. (7)
16. ಒಬ್ಬ ರಾಮನನ್ನು ತಂದೆ ಎಂದವ ! (6)
17. ಜ್ಞಾನಕ್ಕೆ ಹೆಸರಾದ ಭಕ್ತ (6)
18. ಮೋಳಿಗೆ............ ! (3)

### ಮೇಲಿನಿಂದ ಕೆಳಕ್ಕೆ

2. ಅನುಭವ ಮಂಟಪದ ಅಧ್ಯಕ್ಷ. (5)
4. ಭಕ್ತಿ ಭಂಡಾರಿ ಎಂದು ಹೆಸರಾದವ. (4)
6. ಈ ಭಕ್ತ ಅಂಬಿಗನೇ ? (3)
8. ದೇವರಿಂದ ಭಕ್ತ ಪಡೆಯುವುದರ ಕನ್ನಡ ರೂಪ. (3)
9. ವೀರಶೈವ ಧರ್ಮದಲ್ಲಿನ ಭಕ್ತರು. (6)
10. ಶಿವ ಭಕ್ತರು ಸ್ಮರಿಸುವ ಆದ್ಯರಲ್ಲಿ ಒಬ್ಬ. (7)
11. ಶರಣರು ನುಡಿದ ನುಡಿ. (3)
12. ಅಲ್ಲಮನನ್ನು ಪ್ರಶ್ನಿಸಿದ ಜ್ಞಾನಿ (4)
14. ಕಾಯಕದಲ್ಲಿ ತೊಡಗಿದ ಒಬ್ಬ ಶಿವಭಕ್ತ (4)
15. ಎಡದಿಂದ ಬಲಕ್ಕೆ 5 ರಲ್ಲಿನ ಉತ್ತರ ರೂಪ. (4)

(ಉತ್ತರಗಳಿಗಾಗಿ 38ನೇ ಪುಟ ನೋಡಿ)

ಶ್ರೀಮತಿ ಎಸ್. ವಿ. ಹೇಮಾವತಿ

# ಮಹಾಭಾರತದ ಎರಡು ಪಾತ್ರಗಳು

ಅಸಂಖ್ಯ ಸಂಖ್ಯೆಯಲ್ಲಿ ಗಜ, ರಥ, ತುರಗ ಪದಾತಿಗಳು, ರತ್ನ ಖಚಿತವಾದ ಆಭರಣಗಳನ್ನೂ, ರಾಜೋಚಿತವಾದ ಉಡುಪುಗಳನ್ನೂ ತೊಟ್ಟ ರಾಜ ಮಹಾರಾಜರು, ರಾಜ ಕುಮಾರರು, ಅವರ ರಾಣಿಯರು, ಪುರಪ್ರಮುಖರು, ಬ್ರಾಹ್ಮಣ ಸುವಾಸಿನಿಯರು, ಕುರುರಾಜರ ಬಿರುದು ಬಾವಲಿಗಳನ್ನು ಉಗ್ಘಡಿಸುವ ವಂದಿಮಾಗಧರು ಹೀಗೆ ಹಸ್ತಿನಾಪುರದ ರಾಜ ಮಾರ್ಗದಲ್ಲಿ ಮೆರವಣಿಗೆ ಹೊರಟಿದೆ ಉಪ್ಪರಿಗೆಗಳ ಮೇಲೆ, ರಾಜಮಾರ್ಗದಲ್ಲಿ ಜನ ನಿಂತು ತಮ್ಮ ವೃದ್ಧ ರಾಜರಾಣಿಯರನ್ನು ಬೀಳ್ಕೊಡುತ್ತಿದ್ದಾರೆ. ಎಲ್ಲರ ಕಣ್ಣುಗಳಲ್ಲೂ ಧಾರೆ ಧಾರೆಯಾಗಿ ಅಶ್ರು ಪ್ರವಾಹ.

ಎಲ್ಲರಿಗಿಂತ ಮುಂದೆ ತೆಳುವಾದ, ನೀಳ ಶರೀರದ ಸುಂದರಳಾದ ಈ ವೃದ್ಧೆ ಇದ್ದಾಳೆ. ಆವಳ ಫಲಿತ ಕೇಶಗಳು ಸುರುಳಿ ಸುರುಳಿಯಾಗಿ ಹಿಮಾಚಲದ ಹಿಮರಾಶಿಯನ್ನು ನೆನಪಿಗೆ ತರುತ್ತಿವೆ ಮುಖದಲ್ಲಿ ಗೆರೆಗಳು ಆಳವಾಗಿ ಮೂಡಿದ್ದರೂ ಕೂಡಾ, ಮುಖ ಮನೋಹರವಾಗಿ, ಆಕೆಯಲ್ಲಿ ಭಕ್ತಿ ಭಾವವನ್ನು ಉಂಟುಮಾಡುತ್ತಿದೆ. ಆಕೆಯ ಹಿಂದೆ ಎತ್ತರವಾದ ಗೌರಾಂಗಿಯೊಬ್ಬಳು ಮೊದಲಿನವಳ ಭುಜದ ಮೇಲೆ ಕೈಯೂರಿಕೊಂಡು ನಡೆಯುತ್ತಿದ್ದಾಳೆ. ಆಕೆಯೂ ಸುಂದರಿಯೇ. ಆಕೆಯ ಕಣ್ಣುಗಳಿಗೆ ಪಟ್ಟಿಯೊಂದಿದೆ. ಆಕೆಯ ಭುಜಗಳನ್ನು ಹಿಡಿದು ಈ ವೃದ್ಧ ಹೊರಟಿದ್ದಾನೆ. ಆನೆಯ ಸೊಂಡಿಲಿನಂತಿರುವ ಆಜಾನುಬಾಹುಗಳು, ಸುದೃಢ ಶರೀರ, ವಿಶಾಲವಾದ ಹಣೆ, ಆತ ಸಾರ್ವಭೌಮನೆಂಬುದನ್ನು ಸಾರುತ್ತಿವೆ.

ಹೌದು, ಹತ್ತುಸಾವಿರ ಆನೆಗಳ ಬಲವುಳ್ಳವನಾಗಿದ್ದ, ಭಾರತದ ರಾಜ ಮಹಾರಾಜರಿಂದ ಸೇವೆಗೊಳ್ಳುತ್ತಿದ್ದ ಧೃತರಾಷ್ಟ್ರ ಇಂದು ತನ್ನ ಪಟ್ಟದ ರಾಣಿಯಾದ ಗಾಂಧಾರಿಯೊಡನೆ ವಾನಪ್ರಸ್ಥಕ್ಕೆ ತೆರಳಿದ್ದಾನೆ. ಅವನ ಜೊತೆಯಲ್ಲಿ ಕುಂತಿಯೂ, ಸಂಜಯ, ವಿದುರರೂ ಇದ್ದಾರೆ, ಧೃತರಾಷ್ಟ್ರನ ಮಕ್ಕಳೆಲ್ಲಾ ಯುದ್ಧದಲ್ಲಿ ಹತರಾದರು. ಧರ್ಮರಾಯ ರಾಜನಾದ. ಆ ಪಾಂಡವರು ದೊಡ್ಡಪ್ಪನನ್ನು ಎಷ್ಟು ಚೆನ್ನಾಗಿ ನೋಡಿಕೊಳ್ಳುತ್ತಿದ್ದರೂ ಕೂಡಾ ಧೃತರಾಷ್ಟ್ರನ ಮನಸ್ಸಿಗೆ ನೆಮ್ಮದಿಯಿಲ್ಲ. ಆದರಿಂದಲೇ ಈಗ ಕಾಡಿಗೆ ಹೊರಟಿದ್ದಾನೆ.

ಅಗಸೆಯಬಾಗಿಲು ಬಂದಿತು ಧರ್ಮರಾಜಾದಿಗಳು ಧೃತರಾಷ್ಟ್ರನನ್ನು ಬೀಳ್ಕೊಟ್ಟರು. ಆದರೆ ಕುಂತಿ ಹಿಂತಿರುಗುತ್ತಿಲ್ಲ. ಧರ್ಮರಾಜನು ಕೇಳಿದ 'ಅಮ್ಮ, ನೀನು ಹಿಂತಿರುಗುತ್ತಿಲ್ಲವೇ ?' ಕುಂತಿ ಹೇಳಿದಳು;

"ಇಲ್ಲಮಗೂ, ನಾನೂ ಸಹಾ ಇವರೊಡನೆ ಹೊರಟಿದ್ದೇನೆ. ನಾನು ಕರ್ಣನ ಜನ್ಮರಹಸ್ಯವನ್ನು ಹೊರಗೆಡಹಲಿಲ್ಲ ನೋಡು, ಅದು ಮಹಾಪ್ರಮಾದಕ್ಕೆ ಕಾರಣವಾಯಿತು. ಇಷ್ಟೆಲ್ಲಾ ಅನರ್ಥವಾಯಿತು. ನಾನು ಈ ಹಿರಿಯರನ್ನು ಸೇವಿಸಿ ಕೊಂಡಿರುತ್ತೇನೆ" ಭೀಮ ಕೇಳಿದ– "ಅಮ್ಮಾ, ನಮಗೆ ನೀನೇ ಈ ಯುದ್ಧಕ್ಕಾಗಿ ನಮ್ಮನ್ನು ಪ್ರಬೋಧಿಸುತ್ತಿರಲಿಲ್ಲವೆ. ಈಗ ನಾವು ಶಕ್ತಿ ಸಾಹಸಗಳಿಂದ ಪಡೆದ ರಾಜ್ಯವನ್ನು ನೋಡಿ ನೀನು ಸುಖಿಸಬೇಡವೆ". "ಹೌದು ಮಗೂ, ನೀನು ಹೇಳುವುದು ಸರಿ. ಅದು ನನ್ನ ಕರ್ತವ್ಯವಾಗಿತ್ತು. ಜೂಜಿನಲ್ಲಿ





ರಾಜ್ಯವನ್ನೆಲ್ಲಾ ಸೋತು ಅವಮಾನಿತರಾಗಿದ್ದ ನಿಮ್ಮನ್ನು ನಾನು ಎಚ್ಚರಿಸಿದೆ. ಪಾಂಡುರಾಜನ ಸಂತತಿ ನಾಶವಾಗಬಾರದು. ನನ್ನ ಮಕ್ಕಳ ಕಾಲಕ್ಕೆ ಈ ವಂಶ ಕೊನೆಗೊಳ್ಳಬಾರದೆಂದು ನಿಮ್ಮ ಕ್ಷಾತ್ರ ತೇಜವನ್ನು ಬಡಿದೆಬ್ಬಿಸಿದೆ. ನನ್ನ ಪತಿ ರಾಜನಾಗಿದ್ದಾಗ ನಾನು ಬಹಳ ಸೌಖ್ಯವನ್ನು ಅನುಭವಿಸಿದ್ದೇನೆ. ದಾನ ಧರ್ಮಗಳನ್ನು ಮಾಡಿದ್ದೇನೆ. ನನಗೆ ಈಗ ಯಾವ ರಾಜ್ಯವೂ ಬೇಡ. ತಪಸ್ಸನ್ನು ಮಾಡಿ ಪತಿಯನ್ನು ಸೇರಬೇಕೆಂದಿದ್ದೇನೆ. ನೀವೆಲ್ಲಾ ಹಿಂದಿರುಗಿ ಹೋಗಿ ಧರ್ಮದಿಂದ ರಾಜ್ಯಭಾರ ಮಾಡಿ. ಕರ್ಣನನ್ನು ಮರೆಯಬೇಡಿ. ಅವನಿಗಾಗಿ ಒಳ್ಳೆಯ ದಾನಗಳನ್ನು ಕೊಡಿ. ದ್ರೌಪದಿಗೆ ಪ್ರಿಯವಾಗುವಂತೆ ನಡೆದು ಕೊಳ್ಳಿ ಎಂದು ಹೊರಟೇ ಬಿಟ್ಟಳು ಕುಂತಿ.

'ಕರ್ಣನನ್ನು ಮರೆಯಬೇಡಿ' ಎಂದಳು ಕುಂತಿ ಪಾಪ, ಬಹಳ ವರ್ಷಗಳ ಹಿಂದಿನ ಮಾತು–

ಆಗ ಕುಂತಿ ಸಾಕು ತಂದೆಯಾದ ಕುಂತೀಭೋಜನ ಮನೆಯಲ್ಲಿದ್ದಳು. ಆಗ ಒಮ್ಮೆ ದೂರ್ವಾಸ ಮುನಿಗಳು ಕುಂತೀಭೋಜನ ಅರಮನೆಗೆ ಬಂದರು. ಎರಡನೆಯ ರುದ್ರರಾದ ಅವರ ಸೇವೆಗೆ ಬಾಲೆಯಾಗಿದ್ದ ಕುಂತಿ ನಿಂತಳು. ಅವಳ ಶುಶ್ರೂಷೆಗೆ ಮೆಚ್ಚಿ ಋಷಿಗಳು ಅವಳಿಗೆ ಸಂತಾನ ಮಂತ್ರವನ್ನು ಉಪದೇಶಿಸಿದರು ಕನ್ಯೆಯಾದ ಅವಳು ಸಹಜ ಕುತೂಹಲವನ್ನು ತಡೆಯದೆ ಒಂದು ದಿನ ತನ್ನ ಆಪ್ತದಾಸಿಯೊಬ್ಬಳನ್ನು ಕರೆದು ಕೊಂಡು ಅರುಣೋದಯಕ್ಕೆ ಮುಂಚೆಯೇ ಗಂಗಾತೀರಕ್ಕೆ ಹೋಗಿ ಆಗ ತಾನೇ ಉದಯನಾಗುತ್ತಿರುವ ಬಾಲರವಿಯನ್ನು ಕುರಿತು ಮಂತ್ರವನ್ನು ಜಪಿಸಿದಳು ಅವಳ ಭಕ್ತಿಗೆ ಮೆಚ್ಚಿದ ಭಾಸ್ಕರನು ಪುತ್ರನನ್ನು ಕರುಣಿಸಿದನು. ಆಗ ಕುಂತಿಗೆ ತನ್ನ ತಪ್ಪಿನ ಅರಿವಾಯ್ತು. ಕುಂತಿಯಾದರೋ ಶೂರಸೇನ ರಾಜನ ಮಗಳು, ವಸುದೇವನ ತಂಗಿ. ಅಂತಹ ಪವಿತ್ರ ವಂಶದಲ್ಲಿ ಜನಿಸಿದ ತಾನು ಕನ್ಯಾವಸ್ಥೆಯಲ್ಲಿ ಪುತ್ರವತಿಯಾದದು ಕಳಂಕವಲ್ಲವೆ ? ದಾಸಿಯ ಪ್ರೇರಣೆಯಂತೆ ಆ ಶಿಶುವನ್ನು ಗಂಗಾನದಿಯಲ್ಲಿ ತೇಲಿಬಿಟ್ಟಳು.

ಮುಂದೆ ಪ್ರಾಪ್ತ ವಯಸ್ಕಳಾದಾಗ ಕುರುವಂಶದ ಪಾಂಡುರಾಜನೊಡನೆ ಅವಳ ವಿವಾಹವಾಯ್ತು. ಸಕಲ ಸೌಖ್ಯಗಳಿದ್ದಾಗ್ಯೂ ಶಾಪಗ್ರಸ್ತನಾದ ಪಾಂಡುರಾಜನಿಂದ ಸಂತಾನ ಪಡೆಯಲಾಗಲಿಲ್ಲ. ಆಗ ತತ್ಕಾಲದ ಸಾಮಾಜಿಕ ನಿಯಮದಂತೆ ಪತಿಯ ಅಪ್ಪಣೆ ಪಡೆದು ಕುಂತಿ ಯಮ, ವಾಯು ಹಾಗೂ ಇಂದ್ರರಿಂದ ಕ್ರಮವಾಗಿ ಧರ್ಮ, ಭೀಮ, ಅರ್ಜುನರನ್ನು ಪಡೆದಳು. ಇನ್ನೊಂದು ಮಂತ್ರವನ್ನು ಮಾದ್ರಿಗೆ ಉಪದೇಶಿಸಿದಳು. ಮಾದ್ರಿಯು ಅಶ್ವಿನೀ ದೇವತೆಗಳಿಂದ ನಕುಲ ಸಹದೇವರನ್ನು ಪಡೆದಳು.

**ಶ್ರೀಮತಿ ರುಕ್ಮಿಣೀಗಿರಿಮಾಜಿ**

ಮುಂದೆ ಪಾಂಡುರಾಜ ಮೃತನಾಗಿ ಧರ್ಮರಾಜಾದಿಗಳು ಧೃತರಾಷ್ಟ್ರನ ಪಾಲನೆಗೊಳಪಟ್ಟಾಗ ಕುಂತಿಯ ಮಾನಸಿಕ ಯಾತನೆ ಅಸಾಧ್ಯವಾಯಿತು. ಪ್ರತಿನಿಮಿಷ ಪ್ರತಿಘಳಿಗೆ ಅವಳಿಗೆ ಚಿಂತೆ. ಅವಮಾನ. ಕರ್ಣನನ್ನು ನೆನೆದಾಗಲೆಲ್ಲಾ ಎದೆಯಾಳದಲ್ಲಿ ನೋವು ಅಳಕು ಸಹಜ. ಕರ್ಣಕುಂಡಲಗಳನ್ನು, ಕವಚವನ್ನೂ ಧರಿಸಿದ್ದ ಸುಂದರನಾದ, ದೀರ್ಘಕಾಯನಾದ ಆ ರಾಧೇಯ ಕೌಂತೇಯನೆಂದು ಅವಳ ಹೃದಯ ಉಬ್ಬುತ್ತಿತ್ತು. ಸ್ತನಗಳು ತುಂಬುತ್ತಿದ್ದುವು ಆದರೆ ಅವನನ್ನು ಪುತ್ರನೆಂದು ಪರಿಗ್ರಹಿಸಲು ಸಾಧ್ಯವೇ ಇರಲಿಲ್ಲ. ಈ ಒಳಗುದಿ ಅವಳನ್ನು ಬೇದಿಸುತ್ತಿತ್ತು

ಹನ್ನೆರಡು ವರ್ಷಗಳ ವನವಾಸವನ್ನೂ ಒಂದು ವರ್ಷದ ಅಜ್ಞಾತ ವಾಸವನ್ನೂ ಮುಗಿಸಿಕೊಂಡು ಬಂದ ಮೇಲೂ ದುರ್ಯೋಧನ ಧರ್ಮರಾಜನಿಗೆ ರಾಜ್ಯ ಕೊಡಲು ನಿರಾಕರಿಸಿದ. ಶ್ರೀ ಕೃಷ್ಣನ ರಾಯಬಾರವು ವಿಫಲವಾಯ್ತು. ಆಗ ಕೃಷ್ಣ ಕುಂತಿಯನ್ನು ಕರ್ಣನೆಡೆಗೆ ಕಳಿಸಿದ.

ಅಪರಾಹ್ನವಾಗಿದೆ ಗಂಗಾನದಿಯ ದಡದಲ್ಲಿ ನಿಂತು ಕರ್ಣ ಸಂಧ್ಯೋಪಾಸನೆ ಮುಗಿಸಿ ಅರ್ಘ್ಯ ಕೊಟ್ಟು ಹಿಂದಿರುಗಿದಾಗ ಕುಂತಿಯನ್ನು ಕಂಡು ಕರ್ಣನ ಅಭಿವಾದನೆ ಗೈಯುತ್ತಾನೆ. ಕುಂತಿ ಪ್ರೀತಿಯಿಂದ ಅವನನ್ನು ಮೇಲೆತ್ತಿ ಮೈದಡವಿ ಅವನಿಗೆ ಅವನ ಜನ್ಮ ರಹಸ್ಯವನ್ನು ತಿಳಿಸುತ್ತಾಳೆ. ಅವನು ರಾಧೆಯ ಮಗನಲ್ಲ, ತನ್ನ ಜ್ಯೇಷ್ಠ ಪುತ್ರ; ಈಗ ಅವನು ರಾಜ್ಯ ಭಾರವಮಾಡಲಿ ಎಂದು. ಇದನ್ನೆಲ್ಲಾ ಹಿಂದಿನ ದಿನವೇ ಕೃಷ್ಣ, ಅವನಿಗೆ ತಿಳಿಸಿದ್ದ. ಆಗ ಅವನಿಗೆ ಎಷ್ಟು ದುಃಖವಾಗಿತ್ತು! ತಾನು ಪವಿತ್ರಳಾದ ರಾಜ ಸ್ತ್ರೀಯ ಗರ್ಭದಲ್ಲಿ ಹುಟ್ಟಿದ್ದರೂ ಕೂಡ ಇಷ್ಟುದಿನ ಜನಗಳಿಂದ ಮಾತು ಮಾತಿಗೂ ಸೂತಪುತ್ರನೆಂದು ಹಂಗಿಸಿ–ಭಂಗಿಸಿ ಕೊಂಡು ಲಜ್ಜಾಸ್ಪದನಾಗುತ್ತಿದ್ದ ಆಗ ದುರ್ಯೋಧನ ಮಾತ್ರ ನಿಜವಾದ ಪ್ರೀತಿಯಿಂದ ಕೇವಲ ತನ್ನ ಪೌರುಷವನ್ನು ಗೌರವಿಸಿ ಅಂಗ ರಾಜ್ಯದ ಪಟ್ಟಾಭಿಷೇಕ ಮಾಡಿದ್ದ. ಈಗ ಅವನನ್ನು ತೊರೆದು ಬರಬೇಕು ಅಥವಾ ತಾಯಿಮಾತನ್ನು ಮೀರಬೇಕು ಕರ್ಣ ಸ್ವಾರ್ಥಿಯಲ್ಲ ಹೋಗು ತಾಯಿ ನಿನ್ನ ಅರ್ಜುನನನ್ನುಳಿದು ಇತರ ಮಕ್ಕಳನ್ನು ಕೊಲ್ಲೆ, ಎಂದು ಮಾತು ಕೊಟ್ಟ ಈ ವೇದನೆಯನ್ನು ಕುಂತಿಯೊಬ್ಬಳೇ ಸಹಿಸಬಲ್ಲಳು.

ಕುಂತಿಯ ಮಾನಸಿಕ ವೇದನೆ ಅವಳ ಬಾಲ್ಯದಿಂದ ಮುಪ್ಪಿನವರೆಗೆ ಇದ್ದೇ ಇತ್ತು. ಆದರೆ ಆಕೆಯು ಮಹಾಧೀರೆ. ಕೈಗೆ ಬಂದ ರಾಜ್ಯ ಸಂಪತ್ತನ್ನೂ ತೊರೆದು ಹೋದಳು ಅವಳ ಕನ್ಯಾವಸ್ಥೆಯಿಂದ, ಮುಪ್ಪಿನ ವರೆಗೆ ಅವಳನ್ನು ಒಳಗೊಳಗೇ ದಹಿಸುತ್ತಿದ್ದ ಚಿಂತಾಗ್ನಿ ಕಾಳ್ಗಿಚ್ಚಿನ ರೂಪದಲ್ಲಿ ಹೊರಗೆ ಬಂದು ಅವಳನ್ನು ದಹಿಸಿದ ಚಿತಾಗ್ನಿಯಾಗಿ ಹೋಯಿತು.

ಕುಂತಿಯ ನಂತರದ ಇನ್ನೊಂದು ಹಿರಿಯ ಜೀವ ಗಾಂಧಾರಿ. ಈಕೆ ಸಬಲರಾಜನ ಮಗಳು. ಧೃತರಾಷ್ಟ್ರನನ್ನು ಮದುವೆಯಾದನಂತರ ಗಂಡನಿಗಿಲ್ಲದ ಸೌಖ್ಯ ತನಗೇಕೆಂದು ಕಣ್ಣುಗಳಿಗೆ ಪಟ್ಟಿಯನ್ನು ಬಿಗಿದು ಕೊಂಡಳು.

ಈಕೆ ಗರ್ಭಿಣಿಯಾಗಿದ್ದಾಗ ಎರಡು ವರ್ಷಗಳಾದಾಗ್ಯೂ ಪ್ರಸವವಾಗದಿರಲು ತನ್ನ ಗರ್ಭವನ್ನು ಹೊಸೆದುಕೊಂಡು ಪಿಂಡವನ್ನು ಹೊರಗೆ ಹಾಕಿದಳು ವ್ಯಾಸರು ಆ ಪಿಂಡವನ್ನು ತಣ್ಣೀರಿನಲ್ಲಿ ತೊಳೆಸಲು ಅದು ನೂರು ಚೂರಾಯಿತು ಅವುಗಳನ್ನು ತುಪ್ಪದ ಗಡಿಗೆಗಳಲ್ಲಿಟ್ಟು ಬೆಳೆಸಿದರು ಅವೆಲ್ಲಾ ಕಾಲಕ್ರಮದಲ್ಲಿ ಬೆಳೆದು ಮಕ್ಕಳುಗಳಾದುವು. ಹಿರಿಯನೇ ದರ್ಯೋಧನ ಇವನನ್ನನುಸರಿಸಿ ತೊಂಭತ್ತೊಂಭತ್ತೂ ಗಂಡು ಮಕ್ಕಳ್

ಗಾಂಧಾರಿ ತನ್ನ ಮಕ್ಕಳು ಬಗ್ಗೆ ಅನೇಕ ದುರ್ವಾರ್ತೆಗಳನ್ನು ಕೇಳುತ್ತಿರುತ್ತಾಳೆ. ಎಷ್ಟೋ ಬಾರಿ ತಿದ್ದಲು ಯತ್ನಿಸುತ್ತಾಳೆ. ಸಾಧ್ಯವಾಗುವುದಿಲ್ಲ ಜೆಂಕಿಗೆ ಗಾಳಿಯಂತೆ ಶಕುನಿ, ಮೋಹಾಂಧನಾದ ಧೃತರಾಷ್ಟ್ರ ಇವರುಗಳು ದುರ್ಯೋಧನಾದಿಗಳನ್ನು ತಡೆಯುವುದೇ ಇಲ್ಲ. ಆಕೆ ಕಣ್ಣಿದ್ದೂ ಕುರುಡಿ ಆಕೆಯ ಹೃದಯ ಬೇಯುತ್ತಲೇ ಇರುತ್ತದೆ

ಕೊನೆಗೆ ಮಕ್ಕಳೆಲ್ಲಾ ಹತರಾಗುತ್ತಾರೆ ಗಾಂಧಾರಿ ಪುತ್ರ ಶತ ಶೋಕದಲ್ಲಿ ಮಮ್ಮಲ ಮರುಗುತ್ತಾಳೆ. ಅವಳಿಗೆ ಪಾಂಡವರ ಮೇಲೆ ಎಷ್ಟು ಕೋಪವಿತ್ತೆಂದರೆ ಅದು ಪಾಂಡವಕುಲವನ್ನೇ ದಹಿಸಲು ಅಣಿಯಾಗಿತ್ತು. ಆದರೆ ಶ್ರೀ ಕೃಷ್ಣನ ಅಭಯ ಪಾಂಡವರಿಗಿದ್ದುದರಿಂದ ಗಾಂಧಾರಿಯ ಉರಿನೋಟ ಧರ್ಮರಾಯನ ನಖಾಗ್ರಗಳನ್ನು ಮಾತ್ರ ಸುಟ್ಟು ಕರಕು ಮಾಡಿತು.

ಗಾಂಧಾರಿ ಸುಸಂಸ್ಕೃತಳು ಮಹಾ ಪ್ರಜ್ಞಳು ತನ್ನ ಮಕ್ಕಳ ತಪ್ಪು ಅವಳಿಗೆ ತಿಳಿದಿತ್ತು. ಭಯಪಟ್ಟು ಆಕೆಯನ್ನು ನಮಸ್ಕರಿಸಲು ಬಂದ ಪಾಂಡರಿಗೆ ಹೇಳುತ್ತಾಳೆ "ನೀವು ನೀತಿವಂತರು ಭಯಪಡಬೇಡಿ ಅಳಿದ ನಿಮ್ಮ ಬಂಧುಗಳಿಗೆ ಪಿಂಡ ಪ್ರದಾನ ಮಾಡಿ ಹೋಗಿ"

ಹೀಗೆ ಸತ್ಯವತಿ, ಅಂಬಿಕೆ, ಅಂಬಾಲಿಕೆಯರ ಪರಂಪರೆಯಲ್ಲಿ ಬಂದ ಕುಂತಿ ಮತ್ತು ಗಾಂಧಾರಿಯರು ಮಹಾಭಾರತದ ಎರಡು ಅನರ್ಘ್ಯರತ್ನಗಳು. ಮಿಂಚದ ಧ್ರುವ ತಾರೆಗೆಗಳು.

*

## ಭಾರತೀಯ ಸಾಹಿತ್ಯ

# ಮಹಾಕವಿ ಕಂಬನ್

—ಅಕ್ಕ ಮಹಾದೇವಿ

ತಿರುವಳ್ಳುವರ್ ನಂತರದ ತಮಿಳಿನ ಮಹಾಕವಿಯೆಂದರೆ ಕಂಬನ್. ಇವನಿಗೆ ಕಂಬನ್ ಎಂದು ಹೆಸರು ಬರಲು ಅನೇಕ ಕಾರಣಗಳಿವೆ. ಕಂಬ ಕುಲದಲ್ಲಿ ಹುಟ್ಟಿದರಿಂದ ಕಂಬನ್ ಎಂಬ ಹೆಸರು ಬಂತೆಂದು ಕೆಲವರು. ದೇವಾಲಯದ ಕಂಬದ ಬಳಿ ಹುಟ್ಟಿದರಿಂದ ಈತನನ್ನು ಕಂಬನ್ ಎಂದು ಕರೆಯುವುದಾಗಿ ಇನ್ನೂ ಕೆಲವರು ಹೇಳುತ್ತಾರೆ. ಈತನ ಊರು ತಿಳುವೊಳಂದೂರು. ಈ ಊರಿನಲ್ಲಿ ಕಂಬನ ವಿಗ್ರಹವಿದೆ.

ಇವನ ಕಾಲವನ್ನು 9ನೇ ಶತಮಾನದಿಂದ 12ನೇ ಶತಮಾನದವರೆಗೂ ಒಯ್ದಿದ್ದಾರೆ. ಕಂಬನೇ ತನ್ನ ಕಾವ್ಯದಲ್ಲಿ ಹೇಳಿಕೊಂಡಿರುವಂತೆ ಕ್ರಿ. ಶ. 885 ಕ್ಕೆ ಸೇರಿದವನು. ಆದರೆ ಈತನ ಕಾವ್ಯದಲ್ಲಿ ಉತ್ತಮ ಎಂಬ ಹೆಸರು ಬಂದಿರುವುದರಿಂದ ರಾಜ ಉತ್ತಮ ಚೋಳನ ಕಾಲದವನು, ಎಂದರೆ ಕ್ರಿ. ಶ. 10ನೇ ಶತಮಾನದವನು ಎನ್ನುತ್ತಾರೆ. ಈತ ಮೂರನೇ ಕುಲೋತ್ತುಂಗ ಚೋಳನ ಆಸ್ಥಾನ ವಿದ್ವಾಂಸನಾಗಿದ್ದ ನೆಂದು ಈತನ ಕಾಲವನ್ನು 12ನೇ ಶತಮಾನವೆಂದು ಕೆಲವರು ಹೇಳುತ್ತಾರೆ. ಈ ಹೇಳಿಕೆಗಳೇನೇ ಇರಲಿ ಇವನು 9ನೇ ಶತಮಾನದ ಕವಿ ಎಂದು ಹೆಚ್ಚಿನ ವಿದ್ವಾಂಸರ ಅಭಿಪ್ರಾಯ.

ಕಂಬನ್ ತಮಿಳಿನ ಮಹಾಕವಿ. ಸಂಗಂ ಕಾಲದ ಕವಿಗಳಲ್ಲಿ ತಿರುವಳ್ಳುವರ್ ನಂತರದ ಮಹಾಕವಿಯೆಂದರೆ ಕಂಬನೇ. ಈತ ವಿನಯಶಾಲಿ ಕವಿ. 'ವಾಲ್ಮೀಕಿ ರಾಮಾಯಣವೆಂಬ ಹಾಲ್ಗಡಲನ್ನು ಕುಡಿಯುವ ಬೆಕ್ಕು ನಾನು' ಎಂದಿದ್ದಾನೆ ಕಂಬನ್. ಈತನನ್ನು ಕುರಿತಂತೆ ಅನೇಕ ಪ್ರಶಂಸಾ ವಾಕ್ಯಗಳಿವೆ 'ಕಂಬನ್ ಹುಟ್ಟಿದ ತಮಿಳ್ನಾಡು,' 'ಕವಿಗಳಲ್ಲೆಲ್ಲಾ ಶ್ರೇಷ್ಠ ಕವಿ ಕಂಬನ್', 'ಕಾವ್ಯ ಹೇಳುವಲ್ಲಿ ಕಂಬನೇ ಶ್ರೇಷ್ಠ' 'ಕಂಬನ ಮನೆಯ ಸೂರು, ತೊಲೆಗಳೂ ಸಹ ಕಾವ್ಯವನ್ನು ಹೇಳುತ್ತವೆ'— ಮುಂತಾದ ಪ್ರಶಂಶೆಗಳಿಗೆಲ್ಲಾ ಅರ್ಹನಾದ ಕವಿ ಕಂಬನ್. ಈತನ ರಾಮಾಯಣ ತಮಿಳು ಸಾಹಿತ್ಯದಲ್ಲೇ ಏಕೆ ಇಡೀ ದೇಸೀ ಸಾಹಿತ್ಯದಲ್ಲಿಯೇ ಮೊಟ್ಟ ಮೊದಲ ರಾಮಾಯಣ ಗ್ರಂಥ. ಈತನ ರಾಮಾಯಣಕ್ಕಿಂತ ಹಿಂದೆ ಯಾವ ರಾಮಾಯಣಗಳೂ ಇದ್ದ ಸುಳಿವಿಲ್ಲ. ಆದರೆ ಅನೇಕ ರಾಮಾಯಣದ ಪ್ರಸಂಗಳು ಬೇರೆ ಗ್ರಂಥಗಳಲ್ಲಿ ದೊರೆಯುತ್ತವೆ. ಸಂಗಂಕಾಲದ ಕಲಿತ್ತೊಕ್ಕೈ, ಪರಿಪಾಡಲ್, ಅಹನಾನೂರು, ಪುರನಾನೂರು, ಮಹಾಕಾವ್ಯಗಳಾದ ಶಿಲಪ್ಪದಿಗಾರಂ, ಮಣಿಮೇಖಲೈ ಮುಂತಾದ ಗ್ರಂಥಗಳಲ್ಲಿ ರಾಮಾಯಣದ ಪ್ರಸಂಗಗಳು ದೊರೆಯುತ್ತವೆ. ವೈಷ್ಣ ಶೈವಯುಗದ ಆಳ್ವಾರರು, ನಾಯನ್ಮಾರರೂ ತಮ್ಮ ರಚನೆಗಳಲ್ಲಿ ರಾಮಾಯಣದ ಅನೇಕ ಪ್ರಸಂಗಗಳನ್ನು ತಂದಿದ್ದಾರೆ. ಕಂಬನ ನಂತರವೂ ಅನೇಕ ರಾಮಾಯಣ ಗ್ರಂಥಗಳು ರಚಿತವಾಗಿವೆ. ಏನೇ ಇರಲಿ ಕಂಬರಾಮಾಯಣದಷ್ಟು ಯಶಸ್ವಿಯಾದ ರಾಮಾಯಣ ಗ್ರಂಥ ತಮಿಳಿನಲ್ಲಿ ಇನ್ನೊಂದಿಲ್ಲ.




ಕಂಬನ ಜೀವನದ ಬಗೆಗೆ ಕೆಲವು ಐತಿಹ್ಯಗಳು ದೊರೆಯುತ್ತವೆ. ಈತನು 7ನೇ ವಯಸ್ಸಿನಲ್ಲಿದ್ದಾಗ ಕ್ಷಡೆಯಪ್ಪ ಮೊದಲಿಯಾರ್ ಇವನಿಗೆ ಆಶ್ರಯ ಕೊಟ್ಟು, ಮುಂದುವರೆಯಲು ಸಹಾಯ ಮಾಡಿದನೆಂದು ತಿಳಿದು ಬರುತ್ತದೆ. ಕಂಬನಿಗೆ ಕಾಳಿಕಾದೇವಿ ಪ್ರತ್ಯಕ್ಷವಾಗಿ ವರಕೊಟ್ಟಳೆಂಬ ಪ್ರತೀತಿ ಇದೆ.ಮೂರನೇ ಕುಲೊತ್ತುಂಗ ಚೋಳನು ಕಂಬನನ್ನು ತಾನೇ ತನ್ನ ಆಸ್ಥಾನಕವಿಯಾಗಿ ಮಾಡಿ ಕೊಂಡನೆಂಬುದಕ್ಕೆ ಒಂದು ಐತಿಹ್ಯವಿದೆ. ಈ ಐತಿಹ್ಯದ ಪ್ರಕಾರ ಕಂಬ ಒಟ್ಟಕ್ಕೂತರ್ ಕವಿಯ ಸಮಕಾಲೀನ ಕವಿ ಒಟ್ಟಕ್ಕೂತರ್ ಚೊಳನ ಆಸ್ಥಾನದಲ್ಲಿದ್ದವನು. ಇವರಿಬ್ಬರನ್ನೂ ರಾಜ ರಾಮಾಯಣ ಬರೆಯುವಂತೆ ಕೇಳಿದ. ಒಟ್ಟಕ್ಕೂತರ್ ಬರೆಯಬೇಕೆಂದು ಸಂಕಲ್ಪಿಸಿದ ಆರು ತಿಂಗಳಲ್ಲಿ ಆರು ಕಾಂಡಗಳನ್ನು ಬರೆದ ಆದರೆ ಈ ಸಮಯಕ್ಕೆ ಕಂಬನ್ ಬರೆಯಲು ಇನ್ನೂ ಪ್ರಾರಂಭಿಸಿಯೇ ಇರಲಿಲ್ಲ. ರಾಜ ಇವರೀರ್ವರನ್ನೂ ಹೇಗೆ ಬರೆಯುತ್ತಿದ್ದೀರೆಂದು ಪ್ರಶ್ನಿಸಿದಾಗ, ಒಟ್ಟಕ್ಕೂತರ್ ಕಂಬನ್ ಇನ್ನೂ ಪ್ರಾರಂಭಿಸಿಲ್ಲವೆಂದು ತಿಳಿದು ರಾಮಾಯಣದ ಒಂದು ಪದ್ಯ ಹೇಳುವಂತೆ ಕೇಳಿ ಕಂಬನನ್ನು ವಿವಾದಕ್ಕೆಳೆದ. ಆಗ ಕಂಬ ಅವನು ಕೇಳಿದ ಪ್ರಸಂಗದ ಪದ್ಯವನ್ನು ಹೇಳಿದ. ಆ ಪದ್ಯದಲ್ಲಿ ಒಂದು ಪದ ಅಪಪ್ರಯೋಗವೆಂದೂ ಅದುಬಳಕೆಯಲ್ಲಿಲ್ಲವೆಂದೂ ಒಟ್ಟಕ್ಕೂತರ್ ಹೇಳಿದ. ರಾಜಹಾ~ು ಒಟ್ಟಕ್ಕೂತರ್ ಇಬ್ಬರೂ ಅಚ್ಚರಿ ಪಡುವಂತೆ ತನ್ನ ಪದಪ್ರಯೋಗ ಸರಿಯೆಂಬುದನ್ನು ಕಂಬನ್ ತೋರಿಸಿ ಕೂಟ್ಟ.

ವಾಲ್ಮೀಕಿ ರಾಮಾಯಣಕ್ಕಿಂತ ಭಿನ್ನವಾದ ಅನೇಕ ಪ್ರಸಂಗಗಳು ಕಂಬ ರಾಮಾಯಣದಲ್ಲಿ ಕಂಡು ಬರುತ್ತವೆ.

ಕಂಬ ರಾಮಾಯಣದಲ್ಲಿ ರಾಮ ಸೀತೆಯರ ವಿವಾಹಪೂರ್ವ ಪ್ರಣಯ ಕಂಡು ಬರುತ್ತದೆ. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಈ ಪ್ರಸಂಗವಿಲ್ಲ. ರಾವಣನಿಗಾಗಿ ಶೂರ್ಪನಖಿ ರಾಮಲಕ್ಷ್ಮಣರನ್ನು ನೋಡುವಂತೆ ಕಂಬ ವಿವರಿಸಿದ್ದಾನೆ. ವಾಲ್ಮೀಕಿ ರಾಮಾಯಣದಲ್ಲಿ ಶೂರ್ಪನಖಿ ಹಠಾತ್ತನೆ ರಾಮಲಕ್ಷ್ಮಣರನ್ನು ನೋಡಿದಂತಿದೆ. ಕಂಬ ರಾಮಾಯಣದಲ್ಲಿ ಶೂರ್ಪನಖಿ ತನ್ನ ರೂಪಪರಿವರ್ತನೆ ಮಾಡಿಕೊಂಡಿರುತ್ತಾಳೆ. ವಾಲ್ಮೀಕಿ ರಾಮಾಯಣದಲ್ಲಿ ತನ್ನ ಸಹಜರೂಪದಲ್ಲಿ ಬರುತ್ತಾಳೆ. ಸೀತಾಪಹರಣ ಸಮಯದಲ್ಲಿ ಸೀತೆಯನ್ನು ರಾವಣ ಒಮ್ಮೆಯಾದರೂ ಮುಟ್ಟಲಿಲ್ಲವೆಂದು ಕಂಬ ರಾಮಾಯಣದಲ್ಲಿದೆ. ವಾಲ್ಮೀಕಿ ರಾಮಾಯಣದಲ್ಲಿ ಸೀತೆಯ ಜುಟ್ಟು ಹಿಡಿದು ಎಳೆದೊಯ್ಯುತ್ತಾನೆ. ಕಂಬ ರಾಮಾಯಣದಲ್ಲಿ ರಾಮ ಜಟಾಯುವಿನ ಸಂಸ್ಕಾರ ಮಾಡಿ ಮುಂದೆ ಹೋಗುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ಹೀಗಿಲ್ಲ. ರಾವಣನಲ್ಲಿ ಎಲ್ಲಾ ಸದ್ಗುಣಗಳಿದ್ದುವೆಂದು ವರ್ಣಿಸಿ ಕಡೆಯಲ್ಲಿ ಆತನನ್ನು ದುರಂತನಾಯಕನನ್ನಾಗಿ ಕಂಬ ಚಿತ್ರಿಸಿದ್ದಾನೆ. ವಾಲ್ಮೀಕಿ

ರಾಮಾಯಣದಲ್ಲಿ ರಾವಣ ಖಳನಾಯಕನಂತೆ ಚಿತ್ರಿತವಾಗಿದ್ದಾನೆ. ರಾಮನನ್ನು ಕಂಬ ವಿಷ್ಣುವಿನ ವಿನ ಅಪರಾವತಾರವೆಂದು ವರ್ಣಿಸಿದರೆ, ವಾಲ್ಮೀಕಿ ರಾಮನನ್ನು ಸದ್ಗುಣವುಳ್ಳ ಒಬ್ಬ ಮಾನವನಂತೆ ವರ್ಣಿಸಿದ್ದಾನೆ. ಹನುಮಂತ, ಗುಹರನ್ನು ಯೋಧರನ್ನಾಗಿ ಕಂಬ ಚಿತ್ರಿಸಿದ್ದಾನೆ ವಾಲಿ ಸತ್ತನಂತರ ತಾರೆ ಸನ್ಯಾಸಿನಿಯಾಗುವಳು. ಆದರೆ ವಾಲ್ಮೀಕಿ ರಾಮಾಯಣದಲ್ಲಿ ಹಾಗಿಲ್ಲ. ಕಂಬರಾಮಾಯಣದಲ್ಲಿ ಸುಗ್ರೀವ ತಾರೆಯನ್ನು ತಾಯಿಯಂತೆ ಕಾಣುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ಹೆಂಡತಿಯಂತೆ ಸ್ವೀಕರಿಸುತ್ತಾನೆ. ವಾಲಿವಧಾ ಪ್ರಸಂಗದಲ್ಲಿ ಕಂಬ ರಾಮನನ್ನು ಸಮರ್ಥಿಸಿದ್ದಾನೆ. ಯುದ್ಧ ಕಾಂಡದಲ್ಲಿ ವಿಭೀಷಣ–ಕುಂಭಕರ್ಣರ ಸಮಾವೇಶವನ್ನು ಕರುಣರಸಪ್ರಧಾನವಾಗಿ ಬಹಳ ನಾಟಕೀಯವಾಗಿ ಕಂಬ ಚಿತ್ರಿಸಿದ್ದಾನೆ ಕಂಬ ರಾಮಾಯಣದಲ್ಲಿ ಶ್ರೀರಾಮ ಯಾರ ಸಲಹೆಯೂ ಇಲ್ಲದೆ ಬ್ರಹ್ಮಾಸ್ತ್ರ ಪ್ರಯೋಗಿಸುತ್ತಾನೆ. ವಾಲ್ಮೀಕಿ ರಾಮಾಯಣದಲ್ಲಿ ಮಾತಲಿ ಬ್ರಹ್ಮಾಸ್ತ್ರ ಪ್ರಯೋಗಿಸುವಂತೆ ಹೇಳುತ್ತಾನೆ

ಕಂಬ ಪಾತ್ರಗಳನ್ನು ಉದಾತ್ತೀಕರಿಸಿದ್ದಾನೆ. ಮುಖ್ಯವಾಗಿ ಕೈಕೇಯಿ, ಸುಗ್ರೀವ, ತಾರೆ, ರಾವಣ ಮುಂತಾದ ಪಾತ್ರಗಳನ್ನು ಮಾರ್ಪಡಿಸಿದ್ದಾನೆ. ಮಾನವ ಸಹಜವಾದ ದೋಷಗಳನ್ನೆಲ್ಲ ಪರಿಹರಿಸಿ ಕಂಬ ಶ್ರೀರಾಮನನ್ನು ದೈವತ್ವಕ್ಕೇರಿಸಿದ್ದಾನೆ ಶಬರಿ ವೃತ್ತಾಂತವನ್ನು ವಿಸ್ತರಿಸಿ ಬಹಳ ಚೆನ್ನಾಗಿ ನಿರೂಪಿಸಿದ್ದಾನೆ.

ಗೋದಾವರೀ ನದಿಯನ್ನು ವರ್ಣಿಸುವಾಗ ಕಂಬ ಕಾವ್ಯದ ಲಕ್ಷಣಗಳನ್ನು ಹೇಳಿದ್ದಾನೆ ಅಣಿ (ಅಲಂಕಾರ), ಪುರುಳ್ (ಭಾವಧ್ವನಿ ಅರ್ಥ), ತುಲ್ಯೆ (ಉಕ್ತಿವೈಚಿತ್ರ್ಯ, ವೈವಿಧ್ಯತೆ,) ತಿಣ್ಣೈ (ಶೃಂಗಾರ ಅಥವಾ ವೀರರಸ ಪ್ರಧಾನವಾದ ವರ್ಣನೆ ಅಥವಾ ಕಥೆ), ಒಳುಕ್ಕಂ (ಶೈಲಿ, ಮಾಧುರ್ಯ) ಈ ಎಲ್ಲ ಗುಣಗಳು ಕಾವ್ಯದಲ್ಲಿರಬೇಕು ಎಂದಿದ್ದಾನೆ. ಇವಿಷ್ಟು ಗುಣಗಳೂ ಆತನ ಕಾವ್ಯದಲ್ಲಿವೆ ಪಂಡಿತ ಪಾಮರಿಗೂ ಸುಲಭವಾಗಿ ಅರ್ಥವಾಗುವಂತಹ ಸರಳವಾದ, ಗಂಭೀರವಾದ ಜನಪ್ರಿಯ ಕಾವ್ಯವಿದು. ಗುಣದಲ್ಲೂ ಗಾತ್ರದಲ್ಲೂ ಹಿರಿದಾದುದೆಂಬ ಹೊಗಳಿಕೆಗೆ ಪಾತ್ರವಾಗಿದೆ ಈ ಕಾವ್ಯ.

ಕಂಬ ರಾಮಾಯಣದಲ್ಲಿ ವರ್ಣನೆಗಳು ಮನೋಹರವಾಗಿವೆ. ಕಾಡಿಗೆ ಹೋಗುತ್ತಿರುವ ರಾಮನನ್ನು ನೋಡಿದ ಕೌಸಲ್ಯೆಯ ದುಃಖವನ್ನು ವರ್ಣಿಸುವಾಗ, 'ಎರಡು ಕರುಗಳಿರುವ ಹಸು ಹಾಲುಣಿಸುವಾಗ ಹೇಗೆ ವ್ಯಥೆ ಪಡುತ್ತದೆಯೋ ಹಾಗೆ ಕೌಸಲ್ಯೆ ದುಃಖಿಸುತ್ತಿದ್ದಳೆಂದು' ವರ್ಣಿಸಿದ್ದಾನೆ.

ಶ್ರೀರಾಮ ಕಾಡಿಗೆ ಹೋಗುವಾಗ ಸ್ವಲ್ಪವೂ ದುಃಖ ಪಡದೆ ಆತ ಹೇಗೆ ಕಾಡಿಗೆ ಹೋದ ಎಂಬುದನ್ನು 'ಭಾರವನ್ನು ಹೊತ್ತ ಎತ್ತಿಗೆ ಭಾರ ಇಳಿಸಿದಾಗ ಉಂಟಾಗುವಷ್ಟು ಸಂತೋಷವಾಯಿತು ರಾಮನಿಗೆ' ಎಂದು ವರ್ಣಿಸಿದ್ದಾನೆ.

ಶ್ರೀರಾಮನು ಕಾಡಿಗೆ ಹೋದ ನಂತರ ಸತ್ತ ದಶರಥನನ್ನು 'ನಾಗರಹಾವು, ಬಾಳೆಗಿಡ, ಬಿದಿರಿನ ಗಿಡ ಇವು ಸಂತಾನ ಪ್ರಾಪ್ತವಾದ ತಕ್ಷಣ ನಾಶ ಹೊಂದಿದ ಹಾಗೆ' –ಎಂದು ವಿವರಿಸಿದ್ದಾನೆ

ನೀಲಮೇಘಶ್ಯಾಮನಾದ ಶ್ರೀರಾಮನನ್ನು– 'ಅದು ವೈಯೋ (ಕಾಡಿಗೆಯೋ), ಮರಕತವೋ, ಮರಿಗಡಲೋ, ಮಳೆಯ ಮುಗಿಲೋ' ಎನ್ನುತ್ತಾನೆ.

ಅಶೋಕವನದಲ್ಲಿದ್ದ ಸೀತೆಗೆ ಹನುಮಂತ ರಾಮ ಕೊಟ್ಟ ಉಂಗವನ್ನು ಕೊಟ್ಟಾಗ, ಆ ಸಮಯದಲ್ಲಿ ಸೀತೆಗಾದ ಆನಂದವನ್ನು ಕಂಬ ಈ ರೀತಿ ಚಿತ್ರಿಸಿದ್ದಾನೆ 'ಕಳೆದುಕೊಂಡ ನಾಗಮಣಿಯನ್ನು ಪಡೆದ ಹಾವಿನಂತೆ' 'ಯಾವುದೋ ಮಹಿಮೆಯಿಂದ ಕುರುಡ ಕಣ್ಣು ಪಡೆದಂತೆ'

ಮೂಲರಾಮಾಯಣದಲ್ಲಿ 24 ಸಾವಿರ ಶ್ಲೋಕಗಳಿವೆ. ಅದನ್ನು 10,500 ಪದ್ಯಗಳಿಗಿಳಿಸಿದ್ದಾನೆ ಕಂಬ. ಈತನ ರಾಮಾಯಣದಲ್ಲಿ 42 ಸಾವಿರ ಸಾಲುಗಳಿವೆ. ರಾಮಾಯಣವನ್ನಲ್ಲದೆ ಇನ್ನೂ ಕೆಲವು ಕಾವ್ಯಗಳನ್ನು ಈತ ಬರೆದಿದ್ದಾನೆ. ಆದರೆ ರಾಮಾಯಣವನ್ನು ಬಿಟ್ಟು ಉಳಿದ ಯಾವ ಗ್ರಂಥವೂ ಸಿಕ್ಕಿಲ್ಲ. ಕಂಬನ್ ಮಹಾಕವಿ ಎಂಬುದನ್ನು ಸಾರಲು ಈತನ ರಾಮಾಯಣವೊಂದೇ ಸಾಕು.

★

## ಆರ್ಜಿತ ತೆಪ್ಪ ಉತ್ಸವ

ಸಾಧಾರಣವಾಗಿ ವರುಷಕ್ಕೊಂದು ಬಾರಿ 3 ದಿನಗಳ ಪರ್ಯಂತ ನಡೆಯುವ ಪ್ಲವೋತ್ಸವವಲ್ಲದೆ, ಭಕ್ತಜನರ ಸೌಕರ್ಯಕ್ಕಾಗಿ ದೇವಸ್ಥಾನದವರಿಂದ ಏರ್ಪಡಿಸಲ್ಪಟ್ಟ ಆರ್ಜಿತೋತ್ಸವ, ಈ ಪ್ಲವೋತ್ಸವ.

ಪ್ರತಿ ಮಂಗಳವಾರದಲ್ಲಿ, ಆರ್ಜಿತಸೇವೆಗಳನಂತರ, ಮಲಯಪ್ಪಸ್ವಾಮಿಯವರನ್ನು ದೇವೇರಿಗಳನ್ನು ಅಲಂಕರಿಸಿ, ಮಂಗಳ ವಾದ್ಯನಾದ, ವೇದಪ್ರಬಂಧ ಪಠನಾದಿಗಳ ನಡುವೆ ಅವರನ್ನು ಅಲಂಕೃತವಾದ ತೆಪ್ಪದ ಮೇಲೆ ಕುಳ್ಳಿರಿಸಿ ಸ್ವಾಮಿ ಪುಷ್ಕರಿಣಿಯಲ್ಲಿ 3 ಪರ್ಯಾಯ ವಿಹಾರಯಾತ್ರೆ ಮಾಡಿಸುತ್ತಾರೆ.

ಈ ಮೂರು ಪ್ರದಕ್ಷಿಣಗಳ ಅನಂತರ ನಿವೇದನ; ಮಂಗಳ ನೀರಾಜನ ನಡೆದು ಸ್ವಾಮಿಯವರು ದೇವೇರಿಗಳು ವಿವಿಧ ಮರ್ಯಾದೆಗಳೊಡನೆ ಆಲಯ ಪ್ರವೇಶ ಮಾಡುತ್ತಾರೆ.

ರು. 1500 ಹಣ ಸಲ್ಲಿಸಿದ ಗೃಹಸ್ಥರು ಈ ಸೇವೆ ಮಾಡಿಸಿ, ಸ್ವಾಮಿಯವರ ಪುಷ್ಕರಿಣೀ ವಿಹಾರವನ್ನು ಮೆಟ್ಟಿಲ ಮೇಲಿದ್ದು ನೊಡಬಹುದು. ಗೃಹಸ್ಥರಿಗೆ ವಸ್ತ್ರಬಹುಮಾನ, ಪ್ರಸಾದವಿನಿಯೋಗಗಳಲ್ಲದೆ, ಸ್ವಾಮಿಯವರ ಆಕೃತಿಯುಳ್ಳ ಬಂಗಾರದ ಪದಕಕೊಡಲ್ಪಡುತ್ತದೆ. ಅವರಿಗೆ ಸಂಬಂಧಿಸಿದ 10 ಜನರನ್ನು ದರ್ಶನಕ್ಕೆ ಬಿಡಲಾಗುತ್ತದೆ.

ತಿರುಮಲೆ ತಿರುಪತಿ ದೇವಸ್ಥಾನ.

1—3—81 ರಿಂದ
31—3—81 ವರೆಗೆ

# ನಿಮ್ಮ ಭವಿಷ್ಯ

ಡಾ॥ ಅರ್ಕ ಸೋಮಯಾಜಿ.



## ಮೇಷ :

(ಅಶ್ವಿನಿ, ಭರಣಿ, ಕೃತ್ತಿಕೆ, 1 ನೇ ಪಾದ)

ಈ ರಾಶಿಯಲ್ಲಿ ಹುಟ್ಟಿದ ಜನರು ಈ ತಿಂಗಳ ಪ್ರಥಮಾರ್ಧದಲ್ಲಿ ಧನಲಾಭ, ಗೌರವ, ಆರೋಗ್ಯ, ಒಳ್ಳೆಯ ಸ್ನೇಹದಿಂದಾಗಿ ಸಂತಸ ಹೊಂದುವರು. ನಂತರ ಸಕಾರಣವಾಗಿ ಸಮಪಾಲು ಹಾಗೂ ಆಡಂಬರದಲ್ಲಿ ಸಮಪಾಲು ಧನವ್ಯಯ. ತಿಂಗಳ ಕೊನೆಯಲ್ಲಿ ಹೆಂಡತಿಯ ಅತೃಪ್ತಿ ಹಾಗೂ ಮನೆಯ ಹೊರಗೆ ವಿವಾದ.
4, 5, 6, 10, 11, 14, 15 ಒಳಿತಿನ ದಿನಗಳು.



## ವೃಷಭ :

( ಕೃತ್ತಿಕೆ, ರೋಹಿಣಿ, ಮೃಗಶಿರ 1,2 ಪಾದ)

ಈ ರಾಶಿಯ ಜನರು ಯಶ ಹೊಂದಿ ಧನಲಾಭ ಪಡೆಯುವರು. ತಿಂಗಳ ದ್ವಿತೀಯಾರ್ಧ ಆರ್ಥಿಕವಾಗಿ ಸುಖಕರ. ಬಂಧುಗಳ ಆಗಮನ ಹಾಗೂ ಹಿರಿಯರ ಪ್ರಶಂಸೆ; ಸುಸ್ನೇಹ ಹಾಗೂ ಶೃಂಗಾರಭಾವ ಸೂಚಿತ.
6, 7, 8, 12. 13, 21, 22, 23 ಒಳಿತಿನ ದಿನಗಳು.



## ಮಿಥುನ :

(ಮೃಗಶಿರ, ಆರ್ದ್ರ, ಪುನರ್ವಸು 1,2,3 ಪಾದ)

ಈ ರಾಶಿಯ ಜನರು ತಿಂಗಳ ದ್ವಿತೀಯಾರ್ಧದಲ್ಲಿ ಯಶ ಹಾಗೂ ಧನಲಾಭ ಹೊಂದುವರು. ಆದರೆ ಆಪ್ತರಿಂದ ಬೇರ್ಪಡೆ ಆಗಬಹುದು. ಬಂಧುಗಳ ಮೂಲಕ ಚಿಂತೆ; ಹೊಸ ಉಡುಪು ಅಥವಾ ಧಾರ್ಮಿಕ ಪ್ರವರ್ತನೆ ಸೂಚಿತ. 1, 2, 7, 8, 9, 10, 11, 14, 15, 18, 19, 25, 26 ಒಳ್ಳೆಯದಿನಗಳು. 23, 24 ರಂದು ಪ್ರಯಾಣ, ಪ್ರಯಾಸ.



## ಕರ್ಕಾಟಕ :

(ಪುನರ್ವಸು 4 ಪಾದ ಪುಷ್ಯ, ಆಶ್ಲೇಷ)

ಈ ರಾಶಿಯ ಜನರಿಗೆ ತಿಂಗಳಿನಲ್ಲಿ ಆಗಾಗ ಪ್ರಯಾಣ, ಹೊಸ ಉಡುಪು. ಶೃಂಗಾರ ಭಾವಗಳ ಯೋಗವಿದೆ. ಧಾರ್ಮಿಕ ಪ್ರವರ್ತನೆ ಸೂಚಿತ. ಹಲವು ಕುಜನರು ತೊಂದರೆ ನೀಡಲು ಪ್ರಯತ್ನಿಸಬಹುದು. ಆದರೂ ಉತ್ಸಾಹ ಯಶಗಳನ್ನು ಪಡೆವ ಹಿರಿಯರ ಪ್ರಶಂಸೆಗೊಳಗಾಗುತ್ತಾರೆ. 4, 5, 10, 11, 13, 17, 18, 21, 22 ಒಳಿತಿನ ದಿನಗಳು.



## ಸಿಂಹ :

(ಮಖ, ಪೂರ್ವ ಫಾಲ್ಗುಣ ಉತ್ತರ 1 ನೇ ಪಾದ:)

ಮೊದಲ ವಾರ ಒಳಿತಿನ ದಿನಗಳು. ಮೊದಲ ಹದಿನೈದು ದಿನಗಳಲ್ಲಿ ಪ್ರಯಾಣ. ವಿವಾದ ಸೂಚಿತವಾಗಿದೆ. ತಿಂಗಳ ದ್ವಿತೀಯಾರ್ಧದಲ್ಲಿ ಹೆಂಡತಿಯ ಅತೃಪ್ತಿ. 19 ರಂದು ಸ್ತ್ರೀಯರಿಂದ ತುಸು ತೊಂದರೆ. ನಂತರ ಹೊಸ ಉಡುಪು, ಶೃಂಗಾರಭಾವ.
3, 4, 12 13, 14, 15, 18, 19, 23, 24 ಒಳಿತಿನ ದಿನಗಳು.



## ಕನ್ಯಾ :

(ಉತ್ತರ 2,3,4, ಪಾದ, ಹಸ್ತ ಚಿತ್ತ 1,2 ಪಾದ)

ತಿಂಗಳ ದ್ವಿತೀಯಾರ್ಧದಲ್ಲಿ ಪ್ರಯಾಣ. ಆಗಾಗ ಹೆಂಡತಿಯ ಅತೃಪ್ತಿ; ಸ್ತ್ರೀಯರಿಂದ ತೊಂದರೆ. ತಿಂಗಳ ಮೊದಲರ್ಧ ಸಾಪೇಕ್ಷವಾಗಿ ಉತ್ತಮವಾಗಿದ್ದು ಗೌರವಲಾಭ. ಒಳ್ಳೆಯ ಸಂದರ್ಭಗಳಲ್ಲಿ ಧನವ್ಯಯ. ಯಾವುದೋ ಒಂದು ಕಾರಣದಿಂದ ತುಸು ಚಿಂತೆ. 6, 5, 7, 8, 14, 15, 16, 17, 20, 21 ಒಳಿತಿನ ದಿನಗಳು.



## ತುಲಾ :

(ಚಿತ್ತ 3,4ಪಾದ ಸ್ವಾತಿ, ವಿಶಾಖಾ1,2,3 ಪಾದ)

ಮೊದಲವಾರದಲ್ಲಿ ಮಕ್ಕಳ ತುಸು ತೊಂದರೆಯಿದ್ದರೂ ಧನಲಾಭ. ತಿಂಗಳ ದ್ವಿತೀಯಾರ್ಧ ತುಸು ಉತ್ತಮ. ತುಸು ವಿವಾದ ಅಥವಾ ಅನಾರೋಗ್ಯ. 14 ರನಂತರ ಯಶ, ಧನ, ಗೌರವ ಇದ್ದರೂ ಈ ತಿಂಗಳು ಸಾಧಾರಣ. 1, 2, 8, 9, 10, 11, 17, 18, 19, 20 ಒಳಿತಿನ ದಿನಗಳು.



## ವೃಶ್ಚಿಕ :

(ವಿಶಾಖ 4 ಪಾದ, ಅನೂರಾಧ, ಜ್ಯೇಷ್ಠ)

ಧನಲಾಭ, ಯಶ, ಸ್ನೇಹಿತರು. ಆದರೂ ಮೊದಲ ವಾರದಲ್ಲಿತಪ್ಪುಹಾದಿಯಲ್ಲಿ ನಡೆಯ

ಬಹುದು. ಮೊದಲವಾರದ ನಂತರ ಮಕ್ಕಳ ಮೂಲಕ ಚಿಂತೆ. ತಿಂಗಳ ಎರಡನೆಯ ಅರ್ಧದಲ್ಲಿ ವಿವಾದ ಅಥವಾ ಅನಾರೋಗ್ಯ. ಬಂಧುಗಳ ಆಗಮನ ಹಾಗೂ ಪ್ರಶಂಸೆ. ಮೊದಲ ವಾರದಲ್ಲಿ ತುಸು ಹೊಟ್ಟೆನೋವು. ಒಟ್ಟಿನಲ್ಲಿ ತಿಂಗಳು ಪೂರ್ತ ಧನಲಾಭ ಹಾಗೂ ಆತ್ಮವಿಶ್ವಾಸ. 3, 4, 10, 11, 12. 13, 19, 20 21, 22 ಒಳಿತಿನ ದಿನಗಳು.



**ಧನುಸ್ಸು :**

(ಮೂಲ, ಪೂ. ಉ 1 ನೇ ಪಾದ)

ತಿಂಗಳ ದ್ವಿತೀಯಾರ್ಧದಲ್ಲಿ ತುಸು ಆನಾರೋಗ್ಯ ಸೂಚಿತವಾಗಿದೆ. ಮೊದಲವಾರ ಆರ್ಥಿಕವಾಗಿ ಉತ್ತಮ. ಅಧಾರ್ಮಿಕ ಪ್ರವರ್ತನೆಯಿಂದಾಗಿ ಭಯ. ಹೊಸ ಸ್ನೇಹಿತರು ಹಾಗೂ ಆತ್ಮವಿಶ್ವಾಸ ಸೂಚಿತವಾಗಿದೆ. 1, 2, 5, 6, 12, 13, 14, 15, 22, 24, 25, 26, ಒಳಿತಿನ ದಿನಗಳು.



**ಮಕರ :**

(ಉ. 2,3,4 ಪಾದ, ಶ್ರವಣ, ಧನಿಷ್ಠ, 1,2 ಪಾದ)

ಹೊಸ ಉಡುಪು, ಯಶ, ಧನಗಳನ್ನು ಸೂಚಿಸುವ ದ್ವಿತೀಯಾರ್ಧ ಸಾಪೇಕ್ಷವಾಗಿ ಉತ್ತಮ. ಆದರೂ ಹಲವು ರೀತಿಯ ವಿವಾದ. ತುಸು ಅಧಾರ್ಮಿಕ ಪ್ರವರ್ತನೆ. ಆದರೆ ತಿಂಗಳು ಪೂರ್ತಿ ಸಾಧಾರಣವಾಗಿರುತ್ತದೆ. ಪ್ರಥಮಾರ್ಧದಲ್ಲಿ ಧನನಷ್ಟ. 4, 5, 7, 8, 14, 15, 19 17, 23, 24, 25, 26 ಒಳಿತಿನ ದಿನಗಳು.



**ಕುಂಭ :**

(ಧನಿಷ್ಠ 3,4 ಪಾದ ಶತಭಿಷ ಪೂ. ಭಾ. 1, 2, 3ಪಾ)

ಅಯುಕ್ತ ಸಲಹೆಯಿಂದಾಗಿ ಧನವ್ಯಯ. ವಿವಾದ ಅಥವಾ ಅಧಿಕೃತ ಚಿಂತೆ ಅಥವಾ ಪ್ರಯಾಣ, ಪ್ರಯಾಸ, ಚಿತ್ತಶಾಂತಿನಾಶ. ಆಪ್ತರಿಂದ ಬೇರ್ಪಡೆ. ಚಿತ್ತಸಮತೆಗಳಿಗೆ ರುದ್ರಾಭಿಷೇಕ ಉತ್ತಮ. 19 ರ ನಂತರ ಒಳ್ಳೆಯದು. 26, 27, 28, 29, ಒಳ್ಳೆಯ ದಿನಗಳು.



**ಮೀನ :**

(ಪೂ. ಭಾ. 4 ಪಾದ ಉ. ಭಾ. ರೇವತಿ)

ಈ ತಿಂಗಳಲ್ಲಿ ಆಗಾಗ ಪ್ರಯಾಣ, ಶೃಂಗಾರಭಾವ. ಅನಗತ್ಯವೆಚ್ಚ. ತಿಂಗಳ ಮೊದಲವಾರದಲ್ಲಿ ಆರ್ಥಿಕ ಸುಸ್ಥಿತಿ. ನಂತರ ಹೆಂಡತಿಯ ಅತೃಪ್ತಿ. ಕುಜನರಿಂದ ಗೌರವ ಭಂಗಪ್ರಯತ್ನ. ಪ್ರಾರ್ಥನಾ ಮನೋಭಾವ ಒಳಿತು. 19, 20, 21, 12, 28, ಒಳಿತಿನ ದಿನಗಳು.



## ಸನಾತನ ಧರ್ಮರಂಗ

### ವಚನವಲ್ಲರಿ

ಉತ್ತರಗಳು

**ಮೇಲಿನಿಂದ ಕೆಳಕ್ಕೆ**

2. ಅಲ್ಲಮಪ್ರಭು.
4. ಬಸವಣ್ಣ.
6. ಚೌಡಯ್ಯ
8. ಹಸಾದ
9. ಶಿವಶರಣರು
10. ದೇವರ ದಾಸಿಮಯ್ಯ
11. ವಚನ
14. ಸಿದ್ಧರಾಮ
15. ಲಿಂಗಪತಿ

**ಎಡದಿಂದ ಬಲಕ್ಕೆ**

1. ಗುಹೇಶ್ವರ
3. ರಾಮನಾಥ
5. ಶರಣಸತಿ
7. ಮಹದೇವಿಯಕ್ಕ
9. ಶಿವಗಣ ಪ್ರಸಾದಿ ಮಹದೇವಯ್ಯ
12. ಮುಕ್ತಾಯಕ್ಕ
13. ಶಂಕರ ದಾಸಿಮಯ್ಯ
16. ಏಕೋರಾಮಿತಂದೆ.
17. ಚೆನ್ನ ಬಸವಣ್ಣ
18. ಮಾರಯ್ಯ.

# ಕರ್ನಾಟಕದಲ್ಲಿ

## ಪುರಂದರದಾಸ ಆರಾಧನೆ

ಆದದ್ದೆಲ್ಲಾ ಒಳಿತೇ ಆಯಿತು
ನಮ್ಮ ಶ್ರೀಧರನ ಸೇವೆಗೆ ಸಾಧನ
ಸಂಪತ್ತಾಯಿತು

ಸಂತ ಪುರಂದರದಾಸರು ತಮ್ಮೆಲ್ಲ ಸಂಪತ್ತನ್ನೂ ದಾನಮಾಡಿ ದಾಸದೀಕ್ಷೆ ಪಡೆದಾಗ ಹಾಡಿದ ಸಾಲುಗಳಿವು ಅಲ್ಲಿಂದ ಮುಂದೆ ಮಧುಕರ ವೃತ್ತಿಯನ್ನು (ಭಿಕ್ಷಾವೃತ್ತಿ) ಯನ್ನು ಅವಲಂಬಿಸಿ ಲಕ್ಷಾಂತರ ಕೀರ್ತನೆಗಳನ್ನು ಕನ್ನಡದಲ್ಲಿ ಹಾಡಿ 417 ವರ್ಷಗಳ ಹಿಂದೆ ಪುಷ್ಯ ಅಮಾವಾಸ್ಯೆಯ ದಿನ ಅತ ವೈಕಂಠವಾಸಿಯಾದರು. ತಿರುವಾಯೂರಿನಲ್ಲಿ ತ್ಯಾಗರಾಜ ಆರಾಧನೆ ಪ್ರತಿವರ್ಷವೂ ನಡೆಯುವಂತೆಯೇ ಹಿಂದಿನ ಎಂಟು ವರ್ಷಗಳಿಂದ ಪುರಂದರದಾಸ ಆರಾಧನೆಯನ್ನು ಬಳ್ಳಾರಿ ಜಿಲ್ಲೆಯ ಹಂಪೆಯಲ್ಲಿ (ಪುರಂದರ ದಾಸರು ತಮ್ಮ ಜೀವನದ ಕೊನೆಗಾಲವನ್ನು ಕಳೆದ ಸ್ಥಳ) ಬೆಂಗಳೂರಿನ ಪುರಂದರ ಸೇವಾಸಮಿತಿಯವರು (ಸ್ಥಾಪಕರು ದಿ॥ ಮ ನ ಮೂರ್ತಿ) ನಡೆಸಿಕೊಂಡು ಬರುತ್ತಿದ್ದಾರೆ

ಈ ವರ್ಷ ಹಂಪೆಯಲ್ಲಿ ಈ ಆರಾಧನೆ ವೈಭವದಿಂದ ಫೆಬ್ರವರಿ 3, 4, 5 ರಂದು ನಡೆಯಿತು. ಸುಮಾರು 150 ಕ್ಕೂ ಮಿಗಿಲಾದ ಹಿರಿಯ ವಿದ್ವಾಂಸ, ಕಿರಿಯ ಸಂಗೀತಜ್ಞರು ಆರಾಧನೆಯಲ್ಲಿ ಭಾಗವಹಿಸಿ ಆ ಮಹಾಚೇತನಕ್ಕೆ ಗೌರವವನ್ನರ್ಪಿಸಿದರು. ಆರಾಧನೆಯಲ್ಲಿ ಭಾಗವಹಿಸಿದ 500ಕ್ಕೂ ಮಿಗಿಲಾದ ಪ್ರತಿನಿಧಿಗಳಿಗೆ ವಿಶೇಷ ಸೌಕರ್ಯಗಳನ್ನು ಸಂಚಾಲಕ ಶ್ರೀ ಎಸ್. ರಾಜಾರಾಯರು ಏರ್ಪಡಿಸಿದ್ದರು. ಕರ್ನಾಟಕದ ಸಂಗೀತ ನಾಟಕ ಅಕ್ಯಾಡಮಿ ಹಾಗೂ ಕೇಂದ್ರ ನಾಟಕ ಅಕ್ಯಾಡಮಿಗಳು ಧನಸಹಾಯ ನೀಡಿದ್ದವು.

ಐತಿಹಾಸಿಕ ದೇವಾಲಯವಾದ ಪಂಪಾ ವಿರೂಪಾಕ್ಷನ ಸನ್ನಿಧಿಯಿಂದ ಮೆರವಣಿಗೆಯಲ್ಲಿ ಹೊರಟ ಶ್ರೀಪುರಂದರ ದಾಸರ ತೈಲಚಿತ್ರದಿಂದ ಆರಾಧನೆ ಆರಂಭವಾಯಿತು. ಮೆರವಣಿಗೆಯ ಮುಂಚೂಣಿಯಲ್ಲಿ ನಡೆದ ಶ್ರೀ ಭದ್ರಗಿರಿ ಸರ್ವೋತ್ತಮ ದಾಸರ ಕಂಚಿನ ಕಂಠದಿಂದ ಹೊರಹೊಮ್ಮಿದ ಪುರಂದರ ದಾಸರ ಉಗಾಭೋಗಗಳ ಗುಂಜನದಿಂದ ವಾತಾವರಣ ತುಂಬಿಸ್ತಿತು. ಗಾಳಿಯಲ್ಲಿ ಭಕ್ತಿಯ ಗಂಧದ ಘಮಘಮ.

ಆರಾಧನೋತ್ಸವವನ್ನು ಉದ್ಘಾಟಿಸಿದ ಗಾನ ಸುಧಾಕರ ಎ. ಸುಬ್ಬರಾಯರು "ಜನ ಸಹಸ್ರ ಸಂಖ್ಯೆಯಲ್ಲಿ ಭಾಗವಹಿಸಿ ಈ ಉತ್ಸವವನ್ನು ಯಶಸ್ವಿ ಗೊಳಿಸಬೇಕೆಂದು'' ಕರೆನೀಡುತ್ತ, "ಸಾಮ್ರಾಟ ಶ್ರೀ ಕೃಷ್ಣದೇವರಾಯನು ಜನಜೀವನದ ಉನ್ನತಿಗಾಗಿ ಶ್ರಮಿಸುವ ಹೊತ್ತಿನಲ್ಲಿ ಪುರಂದರದಾಸರು ಜನ ಜೀವನದಲ್ಲಿ ಭಕ್ತಿಯನ್ನು ಹರಡಿ ಅವರನ್ನು ದೈವತ್ವಕ್ಕೇರಿಸಲು ಶ್ರಮಿಸಿದರು. ಹಾಗಾಗಿ ದಾಸರ ಕೃತಿಗಳು ಸಮಾಜದಲ್ಲಿ ಹಾಸುಹೊಕ್ಕಾಗಿ ಹರಡಿ, ತ್ಯಾಗರಾಜ, ಮುತ್ತುಸ್ವಾಮಿದೀಕ್ಷಿತರು, ಶ್ಯಾಮಾಶಾಸ್ತ್ರಿ ಮೊದಲಾದ ದಕ್ಷಿಣದ ವಾಗ್ಗೇಯಕಾರರನ್ನೂ ಸ್ಫೂರ್ತಗೊಳಿಸಿದವು. ದೀಕ್ಷಿತರಂತೂ ದಾಸರ 'ಪೋಗದಿರೆಲೋ ರಂಗ' ಕೃತಿಯನ್ನು ಕೇಳಿಯೇ ಶಂಕರಾಭರಣ ರಾಗದಲ್ಲಿ ಕೃತಿಗಳನ್ನು ರಚಿಸಿದರು'' ಎಂದು ತಿಳಿಸಿದರು

ಮುಖ್ಯಅತಿಥಿಯಾಗಿದ್ದ ಖ್ಯಾತ ವೈಣಿಕ ಶ್ರೀ ದೊರೆಸ್ವಾಮಿ ಅಯ್ಯಂಗಾರ್ ಹಾಗೂ ಸಂಸ್ಮರಣ ಸಂಚಿಕೆಯನ್ನು ಬಿಡುಗಡೆ ಮಾಡಿದ ಹೊಸಪೇಟೆಯ ಅಸಿಸ್ಟೆಂಟ್ ಕಮೀಷನರ್ ಶ್ರೀ ಬಿ. ಕೃಷ್ಣಪ್ಪನವರು ದಾಸರ ಕೊಡುಗೆಯನ್ನು ಮುಕ್ತಕಂಠದಿಂದ ಶ್ಲಾಘಿಸಿದರು. ಖ್ಯಾತ ಪತ್ರಿಕೋದ್ಯಮಿ ಶ್ರೀ ಅಗರಂ ರಂಗಯ್ಯನವರು ಅಧ್ಯಕ್ಷತೆ ವಹಿಸಿದ್ದರು

ಹಂಪೆಯ ಶ್ರೀ ಶ್ರೀ ನರಸಿಂಹಭಾರತಿ ಸ್ವಾಮಿಗಳು ಸಭೆಯನ್ನು ಕಲಾವಿದರನ್ನೂ ಆಶೀರ್ವದಿಸಿ ಸಮಿತಿಗೆ ತಂಬೂರಿ, ಮೃದಂಗ, ಕಂಜಿರಗಳನ್ನು ಬಹೂಕರಿಸಿದರು.

ಪುರಂದರ ದಾಸರ ಆರಾಧನೆಯು ಮೈಸೂರು ಸೋದರರಲ್ಲಿ ಒಬ್ಬರಾದ ಶ್ರೀ ಆರ್ ಹನುಮಂತ ರಾಯರ ಸ್ವೀಯ ರಚನೆಯಿಂದ ಆರಂಭವಾಗಿ ಗುಡಿಬಂಡೆಯ ಯುವ ಕಲಾವಿದ ಜಿ. ಹನುಮಂತ ಭಟ್ಟರಿಂದ ಮುಂದುವರೆಯಿತು. ಹಿರಿಯ ಕಿರಿಯರೆನ್ನದೆ ಸರ್ವರೂ ಜೊತೆಗೂಡಿದ್ದರು.

ವಿದ್ವಾಂಸರಾದ ಸರ್ವಶ್ರೀ ಎ. ಸುಬ್ಬರಾವ್, ಆರ್. ಕೆ. ಶ್ರೀಕಂಠನ್, ಎಂ. ಎಸ್. ಗೋವಿಂದ ಸ್ವಾಮಿ, ಕುರುಡಿ ವೆಂಕಣ್ಣಾಚಾರ್, ಸಿ. ಎಸ್. ಶಾಸ್ತ್ರಿ, ಟಿ. ಆರ್. ಶ್ರೀನಿವಾಸನ್, ಚಿಂತಲಪಲ್ಲಿ ಕೃಷ್ಣಮೂರ್ತಿ, ಟಿ ಕೆ. ರಾಮಮೂರ್ತಿ, ಶ್ರೀಮತಿಯರಾದ ಪ್ರಸನ್ನಕುಮಾರಿ ಸತ್ಯಂ, ರಾಜಮ್ಮ ಕೇಶವಮೂರ್ತಿ, ಹಾಗೂ ಭಾವೆಗಳು

ಸಭಿಕರನ್ನು ತಮ್ಮ ರಾಗ ರಂಜನೆಯಿಂದ ಉಲ್ಲಾಸ ಗೊಳಿಸಿದರು.

ಯುವ ಕಲಾವಿದರಲ್ಲಿ ಜಿ ಹನುಮಂತ ಭಟ್ಟ (ಉತ್ಕೃಷ್ಟ ಕಂಠ) ನಾಗವಲ್ಲಿ (ಇಂಪು) ರೇಖಾ ನಾರಾಯಣಸ್ವಾಮಿ (ಭಾವ) ಸತ್ಯವತಿ ಹಾಗೂ ಜಯಾ ವೆಂಕಟರಾವ್ (ಲಯ ಹಾಗೂ ಗತಿ) ಮೊದಲಾದವರು ಭರವಸೆಯನ್ನು ಮೂಡಿಸಿದರು.

ಒಂಬತ್ತು ವರ್ಷದ ಬಾಲಕ ಚಿ॥ ರವಿಶಂಕರ್ (ಮೃದಂಗ) ತನ್ನ ಲಯಜ್ಞಾನ, ತಾಲಗಳಿಂದ ರಸಿಕರನ್ನು ಮಂತ್ರಮುಗ್ಧಗೊಳಿಸಿದ್ದು ಅಪೂರ್ವವಾಗಿದ್ದಿತು.

ಸರ್ವಶ್ರೀ ಆರ್. ಕೆ. ವೆಂಕಟರಮಣ ಶಾಸ್ತ್ರಿ, ಆರ್. ಆರ್. ಕೇಶವಮೂರ್ತಿ, ಮತ್ತಿತರ ವಯೋಲಿನ್ ವಿದ್ವಾಂಸರೂ ವಿ. ವಿ. ರಂಗನಾಥನ್, ಎಚ್. ಪಿ. ರಾಮಾಚಾರ್, ಕೆ. ಎಸ್. ಕೃಷ್ಣಮೂರ್ತಿ, ಕೆ. ವೆಂಕಟರಾವ್, ಮೃದಂಗ ವಿದ್ವಾಂಸರೂ ಅತ್ಯುತ್ತಮ ಹಿನ್ನೆಲೆಯನ್ನು ಒದಗಿಸಿದರು.

ಸರ್ವಶ್ರೀ ಸಿ. ಕೃಷ್ಣಮೂರ್ತಿ (ವೀಣೆ) ಎಸ್. ಶೇಷಗಿರಿರಾವ್, ಎಚ್. ಕೆ. ನರಸಿಂಹಮೂರ್ತಿ (ವಯೋಲಿನ್) ಸಿ. ಎಂ. ಮಧುರನಾಥ್, ಪ್ರಕಾಶ್ (ಕೊಳಲು) ಹಾಗೂ ರಾಮದಾಸ್, ರಾಮಕೃಷ್ಣಪ್ಪ (ಹಾರ್ಮೋನಿಯಂ) ಅವರುಗಳ 'ತನಿ'ಗಳು ಉತ್ತಮವಾಗಿದ್ದವು.

ಪುರಂದರ ವಿಠಲ ಮಂದಿರದಲ್ಲಿ ದಾಸರ ನವರತ್ನ ಮಾಲಿಕೆಯ ಸಮೂಹಗಾನದಿಂದ ಉತ್ಸವದ ಸಮಾರೋಪ ನಡೆಯಿತು. ವಿದ್ವಾನ್ ಚೆಲುವರಾಯಸ್ವಾಮಿಯವರು ಮಾತನಾಡಿದರು.

ಶ್ರೀ ಗುರುರಾಜುಲು ನಾಯ್ಡು ಹಾಗೂ ಭದ್ರಗಿರಿ ಸರ್ವೋತ್ತಮ ದಾಸರ ಕಥಾಕಾಲಕ್ಷೇಪಗಳು ಆರಾಧನೆಗೆ ಮೆರುಗು ನೀಡಿದವು.

ಹದಿಮೂರು ಜನ ವಿದ್ವಾಂಸರು ತತ್ಸಂಬಂಧದಲ್ಲಿ ಸನ್ಮಾನಿಸಲ್ಪಟ್ಟರು.

ಕೃಪೆ; ಇಂಡಿಯನ್ ಎಕ್ಸ್‌ಪ್ರೆಸ್.

## ಶ್ರೀ ನಾರಾಯಣ ತೀರ್ಥ ಸಂಸ್ಮೃತಿ

ದಿನಾಂಕ 11-2-81 ರಂದು ಸಂಜೆ ತಿ.ತಿ.ದೇ. ಗಳ ಸಂಗೀತ ಕಲಾಶಾಲೆಯಲ್ಲಿ ಶ್ರೀ ನಾರಾಯಣ ತೀರ್ಥ ಸಂಸ್ಮೃತಿ ದಿನ ಸರಳವಾಗಿ ನಡೆಯಿತು. ತೀರ್ಥರ ವಂಶಸ್ಥರಾದ ಡಾ॥ ಟಿ. ಪತಂಜಲಿಶಾಸ್ತ್ರಿ (ರಾಜಮಹೇಂದ್ರಿಯ ಆಂಧ್ರಕೇಸರಿ ಕಾಲೇಜಿನ ಪ್ರಿನ್ಸಿಪಾಲ್) ಅವರ ಅಧ್ಯಕ್ಷತೆಯಲ್ಲಿ ನಡೆದ ಈ ಸಮಾರಂಭದಲ್ಲಿ ಅನ್ನಮಾಚಾರ್ಯ ವಾಙ್ಮಯ ಪರಿಶೋಧನಾ ವಿಶೇಷಾಧಿಕಾರಿ ಶ್ರೀ ರಾಮಸುಬ್ಬಶರ್ಮರು ಅನ್ನಮಾಚಾರ್ಯ ಹಾಗೂ ನಾರಾಯಣ ತೀರ್ಥರ ಕೀರ್ತನೆಗಳ ತೌಲನಿಕ ಅಧ್ಯಯನ ನಡೆಸಿದರು. ಶ್ರೀ ವೆಂಕಟೇಶ್ವರ ಧಾರ್ಮಿಕ ಶಿಕ್ಷಣ ಸಂಸ್ಥೆಯ ಪ್ರಿನ್ಸಿಪಾಲ್ ಶ್ರೀ ನಾಗಯ್ಯ ಹಾಗೂ ಶ್ರೀ ಎಸ್ ಆರ್. ಜಾನಕೀರಾಮ್ ಅವರುಗಳು ನಾರಾಯಣ ತೀರ್ಥರ ಕೃತಿಗಳಲ್ಲಿನ ರಾಗಗಳ ಬಗ್ಗೆ ಮಾತನಾಡಿದರು. ಶ್ರೀ ನಾಗೇಶ್ವರರಾವ್ ಹಾಗೂ ಶ್ರೀ ವೆಂಕಟೇಶ್ವರ ಕಲಾಪೀಠದ ಕಲಾವಿದರು ನಾರಾಯಣತೀರ್ಥರ ಹಾಡುಗಳಿಂದ ಸಭೆಯನ್ನು ರಂಜಿಸಿದರು. ಕಲಾಪೀಠದ ವಿಶೇಷಾಧಿಕಾರಿ ಶ್ರೀ ಬಾಲಾಂತ್ರಪು ರಜನೀಕಾಂತ ರಾಯರು ಸಭೆಯನ್ನು ಸ್ವಾಗತಿಸಿದರು.

## ಯಾತ್ರಿಕರ ಸೌಲಭ್ಯಕ್ಕಾಗಿ ತಿ. ತಿ. ದೇ. ಸತ್ರ

ಕಡಪ ಜಿಲ್ಲೆಯ ಕಂದಿಮಲ್ಲಯಪಲ್ಲಿಯ ಪೋತಲೂರಿ ವೀರಬ್ರಹ್ಮ ಮಠದ ಯಾತ್ರಿಕರ ಸೌಲಭ್ಯಕ್ಕಾಗಿ ತಿ. ತಿ. ದೇ. ಸತ್ರವೊಂದನ್ನು ಅಲ್ಲಿ ನಿರ್ಮಿಸಲಾಗಿದೆ. ಸುಮಾರು 4.5 ಲಕ್ಷ ರೂಗಳ ವೆಚ್ಚದ ಈ ಸತ್ರವನ್ನು ರಾಜಂಪೇಟೆಯ ಎಂ. ಎಲ್. ಎ. ಹಾಗೂ ತಿ. ತಿ. ದೇ. ಆಡಳಿತ ನಿರ್ವಾಹಕ ಮಂಡಳಿಯ ಸದಸ್ಯೆ ಶ್ರೀಮತಿ ಪಿ. ಪ್ರಭಾವತಮ್ಮ ಅವರ ಅಧ್ಯಕ್ಷತೆಯಲ್ಲಿ ಆಡಳಿತ ನಿರ್ವಾಹಕ ಮಂಡಳಿಯ ಇನ್ನೊಬ್ಬ ಸದಸ್ಯ ಶ್ರೀ ಸೂರ್ಯಪ್ರಕಾಶರಾವ್ ಅವರು ಉದ್ಘಾಟಿಸಿದರು. ತಿ. ತಿ. ದೇ. ಆಡಳಿತ ನಿರ್ವಹಣಾಧಿಕಾರಿ ಶ್ರೀ ಪಿ ವಿ. ಆರ್. ಕೆ. ಪ್ರಸಾದರೂ ಹಾಜರಿದ್ದ ಈ ಉದ್ಘಾಟನಾ ಸಮಾರಂಭ ದಿನಾಂಕ 30-1-81 ರಂದು ನಡೆಯಿತು.

## ಬಾಲಮಂದಿರದಲ್ಲಿ ವಿವಾಹ

ಶ್ರೀ ವೆಂಕಟೇಶ್ವರ ಬಾಲಮಂದಿರದಲ್ಲಿ ಬೆಳೆದು ತಿ. ತಿ. ದೇ. ಯಲ್ಲಿ ಶರಾಫರಾಗಿ ಕೆಲಸ ಮಾಡುತ್ತಿರುವ ಯುವಕ ಶ್ರೀ ಪಿ. ನಾಗರಾಜು ಅವರು ಬಾಲಮಂದಿರದ ವಿದ್ಯಾರ್ಥಿನಿ ಕುಮಾರಿ ಮೋಹನಮ್ಮ ಅವರನ್ನು ವಿವಾಹವಾದರು. ತಿ. ತಿ. ದೇ. ಗಳ ಆಡಳಿತವರ್ಗದ ಅನೇಕ ಹಿರಿಯರು ಈ ಸರಳ ಸಮಾರಂಭಕ್ಕೆ ಆಗಮಿಸಿ ವಧೂವರರನ್ನು ಆಶೀರ್ವದಿಸಿದರು.

*Statement about ownership and other particulars about*

**SAPTHAGIRI**
**(MONTHLY)**

FORM IV
(*See Rule* 8)

| | | | |
|---|---|---|---|
| 1 | Place of publication | .. | TIRUPATI |
| 2 | Periodicity of its publication | .. | Monthly |
| 3 | Honorary Editor | ... | Sri P. V. R K PRASAD, I.A.S. Executive officer, T.T.D |
| 4 | Printer's Name<br>(Whether citizen of India )<br>Address | .<br>... | Sri M. Vijayakumar Reddy, L.P.T.,<br>Yes<br>Manager, T.T.D. Printing Press, Tirupati. |
| 5 | Editor & Publisher's Name<br>(Whether citizen of India )<br>Address | ...<br>... | K. Subba Rao, M.A ,<br>Yes<br>Editor, Sapthagiri T.T.D Journal, Tirupati. |
| 6 | Names and addresses of individuals who own the newspaper and partners or shareholders holding more than one percent of the total capital. | ...<br>... | Board of Trustees represented by the Executive Officer on behalf of T. T. D , Tirupati |

*I, K. Subba Rao, hereby declare that the particulars given above are true to the best of my knowledge and belief.*

TIRUPATI,
*Date* : 28-2-1981.

(*Sd.*) **K. SUBBA RAO,**
*Signature of the Publisher.*

Edited and Published on behalf of the T. T. Devastanams by K. Subba Rao, M. A., and Printed at T. T. D. Press by M. Vijayakumar Reddy, Manager, T. T. D. Press, Tirupati - 517 501.

ಶ್ರೀ ವೇಂಕಟೇಶ್ವರ ಪರಬ್ರಹ್ಮಣೇನಮಃ

**ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.**

**ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.**

**ದೃಢವಾದ ತಾತ್ವಿಕ ತಳಹದಿಯುನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.**

**ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.**

★ ನಿಮ್ಮ ಅಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

**ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.**

ಓಂ ಶ್ರೀ ವೇಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೇಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
ತಿರುಪತಿ

# ತಿ. ತಿ. ದೇವಸ್ಥಾನಗಳು, ತಿರುಪತಿ.



## ಒಂದು ಹಕ್ಕಿನೋಟ

1. ದೇವಸ್ಥಾನಗಳು 42

2 ಸ್ಥಳಾವಕಾಶ
   - ಅ) ಉಚಿತ ಕೊರಡಿಗಳು 1102
   - ಆ) ಬಾಡಿಗೆ ಕೋಣೆಗಳು, ಮನೆಗಳು 812
   - ಇ) ಅತಿಥಿ ಗೃಹಗಳು 16

3. ಫಲಾಹಾರ ಮಂದಿರಗಳು

4. ಆಸ್ಪತ್ರೆಗಳು 8

5 ಶೈಕ್ಷಣಿಕ ಸಂಸ್ಥೆಗಳು
   - ಅ) ಸಂಸ್ಕೃತ ಹಾಗೂ ಧಾರ್ಮಿಕ 5
   - ಆ) ಕಲಾ, ವಿಜ್ಞಾನ ಕಾಲೇಜುಗಳು 5
   - ಇ) ಸಾಂಸ್ಕೃತಿಕ ಹಾಗೂ ತಾಂತ್ರಿಕ 4
   - ಈ) ಶಾಲೆಗಳು 8

6. ದತ್ತಿ ಸಂಸ್ಥೆಗಳು 2

7 ಉದ್ಯಾನವನ ಹಾಗೂ ಪುಷ್ಪವಾಟಿಕೆಗಳು 28 (312 ಎಕರೆ)

8 ಹಯನೋತ್ಪಾದನೆ
   - ಅ) ಜಾನುವಾರು ಸಂಖ್ಯೆ 439
   - ಆ) ಬೇಸಾಯದ ಭೂಮಿ ಎಕರೆ 150
   - ಬೀಡು ಭೂಮಿ " 110

9. ಕಾನನ ಪ್ರದೇಶ ಎಕರೆ 6610 (26 75, ಚ ಕೀ ಮೀ)

10. ತೀರ್ಥಗಳು 16

11. ಅಣೆಕಟ್ಟುಗಳು(ಪೂರ್ಣಗೊಂಡದ್ದು, ಕಾಮಗಾರಿಯಲ್ಲಿರುವುದು) 2

12 ವಸ್ತು ಸಂಗ್ರಹಾಲಯಗಳು 2

13 ವಿಭಾಗಗಳು 58

14 ಕೆಲಸಗಾರರು (ಎಲ್ಲ ರೀತಿಯವರೂ ಸೇರಿ) 5392

15 ಮುದ್ರಣ ಶಾಲೆ 1

16 ಪ್ರಕಟನೆಗಳು
   - ಅ) ಮಾಸಪತ್ರಿಕೆ ಸಪ್ತಗಿರಿ (5 ಭಾಷೆಗಳಲ್ಲಿ)
   - ಆ) ವಾರ್ಷಿಕ ಪಂಚಾಂಗ
   - ಇ) 1979–80 ರಲ್ಲಿ ಧಾರ್ಮಿಕ ಹಾಗೂ ಎಚ್ ಡಿ ಆರ್ ಎಸ್ ಪ್ರಕಟನೆಗಳು 65

17 ಒಂದೂಧರ್ಮರಕ್ಷಣ ಸಂಸ್ಥೆಯ ಶಾಖೆಗಳು 14

18 ವಿಚಾರಣಾ ಕೇಂದ್ರಗಳು 17

19. ಕಲ್ಯಾಣ ಮಂಟಪಗಳು 9

20 ಯಾತ್ರಿಕರ ಸಂಖ್ಯೆ
   - 1979–80 61, 10, 032
   - 1–4–80 ರಿಂದ 31–12–80 ವರೆಗೆ 54,02,462
   - 1981 ಜನವರಿ ತಿಂಗಳಿನಲ್ಲಿ 5,34,151

21 ಆದಾಯ (ಎಲ್ಲ ಬಾಬ್ತುಗಳಿಂದಲೂ ಸೇರಿ)
   - 1979–80 ರೂ 18, 58, 22, 047
   - 1–4–80 ರಿಂದ 31–12–80 ವರೆಗೆ ರೂ 15,48,74,708

22 1981ರ ಜನವರಿ ತಿಂಗಳಿನಲ್ಲಿ ಶ್ರೀ ವೆಂಕಟೇಶ್ವರಸ್ವಾಮಿಯವರ ಹುಂಡಿಯ ವಸೂಲಾತಿ ರೂ 1,08,56,713



ಸೋಮಶೇಖರ ತಾನೆ ಬಲ್ಲ ಶ್ರೀ
ರಾಮ ನಾಮಾಮೃತ ಸವಿಯನೆಲ್ಲ
ಮದನ ಪಿತಾಯೆಂದು ಕುಣಿ ಕುಣಿದಾಡಲು
ಕೆದರಿದ ಕೆಂಜಡೆಗಳ ಪುಂಜದಿ
ಒದಗಿದ ಗಂಗೆ ತುಂತುರು ಹನಿಗಳ ಕಂಡು
ಪದುಮಜಾಂಡಹಿತ ರಾಮರಾಮಾ ಎಂಬ ॥ ಪ ॥

ಆನಂದ ಜಲದ ಸೋನೆಗೆ ಲಲಾಟ
ದಾ ನೇತ್ರ ಬಡಬಾನಲನಂತಿರೆ
ಏನೆನ್ನಲಿ ಬಹುದು ಸುಖಸಾಗರ ದೊಳು
ತಾನೆದ್ದು ಮುಳುಗುತ ರಾಮರಾಮಾ ಎಂಬ ॥ ಪ ॥

ಶ್ರೀ ವ್ಯಾಸರಾಯರು.

ಶ್ರೀ ವೆಂಕಟೇಶ್ವರ ಪರಬ್ರಹ್ಮಣೇನಮಃ

## ನೀವು ಹಿಂದೂಗಳಾಗಿದ್ದೀರಿ-ಹೆಮ್ಮೆ ಹೊಂದಿರಿ.

## ಅತಿಶ್ರೇಷ್ಠ ಪರಂಪರೆ ನಿಮ್ಮದೆಂಬುದನ್ನು ನೆನೆಯಿರಿ.

## ದೃಢವಾದ ತಾತ್ವಿಕ ತಳಹದಿಯನ್ನುಳ್ಳ ಹಿಂದೂಧರ್ಮವು ಧರ್ಮಗಳ ಧರ್ಮವಾಗಿದೆ.

## ನಿಜವಾದ ಹಿಂದೂಗಳಾಗಿರಿ-ಈ ಅಂಶಗಳನ್ನು ಗಮನಿಸಿ.

★ ನಿಮ್ಮ ಆಪೇಕ್ಷೆಯ ಸಂಕೇತವನ್ನು (ತಿಲಕ, ಗಂಧ, ವಿಭೂತಿ, ನಾಮ) ಹಣೆಯಲ್ಲಿ ಧರಿಸುವ ಆಚಾರವನ್ನು ಅಭ್ಯಸಿಸಿ.

★ ಸ್ನಾನದ ನಂತರ ದಿನಕ್ಕೊಮ್ಮೆಯಾದರೂ ನಾಮಜಪ ಮಾಡಿರಿ.

## ಹಲವು ನಾಮಜಪಗಳನ್ನು ಸೂಚಿಸಲಾಗಿದೆ ನಿಮಗಿಷ್ಟವಾದುದನ್ನು ಆಯ್ಕೆ ಮಾಡಿ ಕೊಳ್ಳಿರಿ.

ಓಂ ಶ್ರೀ ವೆಂಕಟೇಶಾಯ ನಮಃ
ಓಂ ನಮೋ ಭಗವತೇ ವಾಸುದೇವಾಯ
ಓಂ ನಮೋ ನಾರಾಯಣಾಯ
ನಮಃ ಶಿವಾಯ

ಹರೇ ರಾಮ ಹರೇ ರಾಮ
ರಾಮ ರಾಮ ಹರೇ ಹರೇ
ಹರೇ ಕೃಷ್ಣ ಹರೇ ಕೃಷ್ಣ
ಕೃಷ್ಣ ಕೃಷ್ಣ ಹರೇ ಹರೇ

★ ಪ್ರತಿ ದಿನವೂ ಶ್ರೀವೆಂಕಟೇಶ್ವರ ಸುಪ್ರಭಾತದ ಹತ್ತು ಶ್ಲೋಕಗಳನ್ನಾದರೂ ಹೇಳಿಕೊಳ್ಳಿರಿ

★ ವಾರಕ್ಕೊಮ್ಮೆ ನಿಮ್ಮ ಆಯ್ಕೆಯ ದೇವಾಲಯಕ್ಕೆ ಕುಟುಂಬದ ಎಲ್ಲ ಸದಸ್ಯರೊಂದಿಗೆ ಹೋಗಿ ದೇವರ ಪ್ರಾರ್ಥನೆ ಮಾಡಿರಿ.

★ ನಿಮ್ಮ ವಾಸಸ್ಥಳದಲ್ಲಿ 'ಓಂ'ಕಾರವನ್ನು ಹಚ್ಚಿರಿ.

★ ಭಗವದ್ಗೀತೆಯ ಒಂದು ಶ್ಲೋಕವನ್ನಾದರೂ ದಿನಕ್ಕೊಮ್ಮೆ ಪಠಿಸಿರಿ.

★ ಹಿಂದೂ ಧಾರ್ಮಿಕ ಸಾಮಾಜಿಕ ಹಬ್ಬಗಳಲ್ಲಿ ಭಾಗವಹಿಸಿರಿ.

---

**ಅವನಲ್ಲಿ ನಂಬಿಕೆಯಿಡಿ-ಅವನು ನಿಮ್ಮನ್ನು ಕಾಪಾಡುತ್ತಾನೆ.**

---

ತಿರುಮಲೆ ತಿರುಪತಿ ದೇವಸ್ಥಾನಗಳು
**ತಿರುಪತಿ.**